

Chandamama, September '49

Photo by R. Krishnan

"ಸ್ನಾನದ ಆನಂದ"

# ಚಂದಮಾಮ

ನಾಲ್ಕು ಭಾಷೆಗಳಲ್ಲಿ

ಕನ್ನಡ, ತೆಲುಗು, ತಮಿಳು ಮತ್ತು ಹಿಂದಿ

ಯಾವ ಭಾಷೆಯಲ್ಲೇ ಆಗಲಿ

**ಬಿಡಿ ಪ್ರತಿ ರೂ. ೦—೬—೦**

**ವಾರ್ಷಿಕ ಚಂದಾ ರೂ. ೪—೮—೦**



ಇಂದೇ ಚಂದಾದಾರರಾಗಿರಿ

## ಏಜೆಂಟರುಗಳು ಬೇಕು

ಏಜೆಂಟರುಗಳಿಲ್ಲದ ದೊಡ್ಡ ಪುಟ್ಟ ಹಳ್ಳಿಗಳಲ್ಲಿ ಚಂದಮಾಮನ ಮಾರಾಟಗಾರರು ರೂ. ೨–೦–೦ ಮಾತ್ರ ಕಳಿಸಿ ೭ ಪ್ರತಿಗಳನ್ನು ಪಡೆದು ರೂ. ೦–೧೦–೦ ಗಳ ಲಾಭವನ್ನು ಪಡೆಯಬಹುದು. ೧೫ರಿಂದ ೨೦ನೇ ತಾರೀಖಿನ ಒಳಗಾಗಿ ರೂ. ೨–೦–೦ನ್ನು ಮನಿಯಾರ್ಡರು ಕಳಿಸಿ ನಿಮ್ಮ ೭ ಪ್ರತಿಗಳನ್ನು ಪಡೆಯಿರಿ.

ಬಿಡಿ ಸಂಚಿಕೆ ಪ್ರತಿ ಒಂದಕ್ಕೆ

**ರೂ. ೦-೬-೦ ಮಾತ್ರ.**

* ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

CHANDAMAMA OFFICE
P. B. 1686, MADRAS—1.

# ಚಂದಮಾಮನಲ್ಲಿ ಈ ಸಲ

•



ಇವಲ್ಲದೆ ಒಗಟು ಚಿತ್ರ, ಸ್ಪರ್ಧೆ, ಇತ್ಯಾದಿಗಳೆಷ್ಟೋ.


















UMA 607 Stone Ring Rs 9-12-0

UMA 723 Stone Button Rs 1-0-0

# 500 ರೂಪಾಯಿಗಳ ಬಹುಮಾನ

## ಉಮಾ ಗೋಲ್ಡ್ ಕವರಿಂಗ್ ವರ್ಕ್ಸ

ಉಮಾ ಮಹಲ್ :: ಮಚಲೀಪಟ್ಟಣ

ಉಮಾ ಗೋಲ್ಡ್ ಕವರಿಂಗ್ ವರ್ಕ್ಸ ಪ್ರೋಸ್ಟಾಫೀಸ್ ಅಪ್ಪಟ ಬಂಗಾರದ ರೇಕನ್ನು ಲೋಹದ ಮೇಲೆ ಅಂಟಿಸಿ (Gold Sheet Welding on Metal) ತಯಾರು ಮಾಡುತ್ತೇವೆ. ಅಲ್ಲವೆಂದು ರುಜುವಾತು ಮಾಡಿದವರಿಗೆ ರೂ. 500 ಬಹುಮಾನ ಕೊಡುತ್ತೇವೆ. ನಾವು ತಯಾರಿಸಿ ಕಳಿಸುವ ಪ್ರತಿ ವಸ್ತು ಮತ್ತು ಪ್ಯಾಕಿಂಗಿನ ಮೇಲೆ "ಉಮಾ" ಎಂಬ ಇಂಗ್ಲೀಷು ಅಕ್ಷರದ ಗುರುತನ್ನು ನೋಡಿ ತೆಗೆದುಕೊಳ್ಳಿ. ಹತ್ತು ವರ್ಷಗಳ ಗ್ಯಾರಂಟಿಯುಂಟು.

ಇದನ್ನು ಪರೀಕ್ಷೆ ಮಾಡಲಿಚ್ಛಿಸುವವರು ಉಮಾ ಆಭರಣಗಳನ್ನು ಮಹಾ ದ್ರಾವಕದಲ್ಲಿ ಇಟ್ಟ 5 ನಿಮಿಷದಲ್ಲೇ ಬಂಗಾರದ ರೇಕು ಲೋಹದಿಂದ ಬೇರೆಯಾಗಿ ಬರುತ್ತದೆ. ಹೀಗೆ ಪರೀಕ್ಷೆ ಮಾಡಿದ ಅನೇಕ ಮಹನೀಯರು ನಮಗೆ ಸರ್ಟಿಫಿಕೇಟುಗಳನ್ನು ಕೊಟ್ಟಿರುವರು. 800 ಡಿಸೈನುಗಳುಳ್ಳ ನಮ್ಮ ಕ್ಯಾಟಲಾಗು ಉಚಿತವಾಗಿ ಕಳುಹಿಸುತ್ತೇವೆ.

ಇತರ ದೇಶಗಳಿಗೆ ಕ್ಯಾಟಲಾಗು ದರಕ್ಕೆ 25% ಅಧಿಕ ಬೆಲೆಯಾಗುತ್ತೆ.

*N. B.*- ವಸ್ತುಗಳ ವಿ. ಪಿ. ಪಾರ್ಸಲು ಛಾರ್ಜು ರೂ. 0-15-0

Tel. : "UMA", Masulipatam.

---

ಮಕ್ಕಳ ಆರೋಗ್ಯ ಮತ್ತು ಶಕ್ತಿಗೆ

## ಬಯೋಟೋನ




ರಾಯ್ & ಕೊ., ಪ್ರಿನ್ಸೆಸ್ ಸ್ಟ್ರೀಟ್,
ಬೊಂಬಾಯಿ ೨.

---

## ★ ಲಾಭ ಪಡೆಯಿರಿ ★

ವ್ಯಾಪಾರಿ ಮತ್ತು ಜಾಹೀರಾತು
ಕೊಡುವವರಿಗೆ ಸದವಕಾಶ

ಕರ್ಣಾಟಕದ ಸರ್ವಪ್ರದೇಶಗಳಲ್ಲಿಯೂ ಅತಿ ಉತ್ತಮ ಸಂಖ್ಯೆಯಲ್ಲಿ ಪ್ರಚಾರಗೊಂಡಿರುವ ಪ್ರತಿ ತಿಂಗಳೂ ೫೦ ಸಾವಿರಕ್ಕೂ ಮೀರಿ ಎಲ್ಲಾ ವರ್ಗದ ಬಾಲ, ಯುವ, ಮತ್ತು ವೃದ್ಧರ ಕಣ್ಮನಗಳನ್ನು ತಣಿಸುವ, ಜನಪ್ರಿಯ ಚಂದಮಾಮದಲ್ಲಿ ಜಾಹೀರಾತು ಕೊಡುವವರಿಗೆ ವಿಶೇಷ ಪ್ರಯೋಜನವುಂಟು. ಈ ಅವಕಾಶ ಕಳೆದುಕೊಳ್ಳಬೇಡಿರಿ.

ಜಾಹೀರಾತು ದರಗಳ ವಿವರಗಳಿಗೆ ಈ ವಿಳಾಸಕ್ಕೆ ಬರೆಯಿರಿ.

*Manager,*

CHANDAMAMA PUBLICATICNS,

P. B. 1686, Madras - 1

# ಮುಖಚಿತ್ರ

ಗೋಪಗೋಪಿಯರು ಬೃಂದಾವನವನ್ನು ಸೇರಿ ನೆಲಸಿದಮೇಲೆ ಸೌಖ್ಯಸಂತೋಷ ಗಳಿಂದ ಕಾಲ ಕಳೆಯತೊಡಗಿದರೆಂದು ತಿಳಿಸಿದೆ. ಗೋಕುಲದಲ್ಲಿದ್ದಾಗ ಇದ್ದಂತಹ ರಾಕ್ಷಸರ ಹಾವಳಿ ತಪ್ಪಿತೆಂದೇ ತಿಳಿದು ಎಲ್ಲರೂ ಮೈಮರೆತರು. ಆದರೆ ಸ್ಥಳ ಬದಲಾಯಿಸಿದ್ದಾಯಿತೇ ಹೊರತು ಇಲ್ಲಿಯೂ ಕೂಡ ಬಾಲಕೃಷ್ಣನಿಗೆ ರಾಕ್ಷಸರಿಂದ ತೊಂದರೆ ತಪ್ಪಲಿಲ್ಲ. ಸ್ವಲ್ಪಕಾಲದೊಳಗೇ ಇದು ನಿದರ್ಶನಕ್ಕೆ ಬಂದಿತು.

ಒಂದುದಿನ ಕೃಷ್ಣ, ತನ್ನ ಅಣ್ಣ ಬಲರಾಮ ಮತ್ತು ಇತರ ಗೋಪಬಾಲ ರೊಂದಿಗೆ ಕರುಗಳನ್ನು ಮೇಯಿಸುತ್ತಾ ಬಹುದೂರ ಹೋದನು. ಮನದಣಿಯಾಗಿ ಜೂಟಾಟ, ಮರಕೋತಿ, ಕುದುರೆಯಾಟ ಎಲ್ಲವನ್ನೂ ಆಡಿದನು. ಆಟವಾಡಿದಮೇಲೆ ಎಲ್ಲರಿಗೂ ಬಹಳ ಬಾಯಾರಿಕೆಯುಂಟಾಯಿತು. ಕರುಗಳೂ ಹತ್ತಿರದಲ್ಲಿ ನೀರೆಲ್ಲೂ ಕಾಣದೇ ಅಡ್ಡಾಡತೊಡಗಿದುವು. ಎಲ್ಲರೂ ನೀರು ಹುಡುಕಿಕೊಂಡು ಹೊರಟು ಒಂದು ಸಣ್ಣ ಕೆರೆಯಬಳಿ ಬಂದರು.

ಈ ಕಟ್ಟೆಯ ಬಳಿಯಲ್ಲೇ ಬಕಾಸುರನು ಬಕದ ರೂಪದಲ್ಲಿ ದೊಡ್ಡ ಬಂಡೆ ಯಂತೆ ಅಲ್ಲಾಡದೆ ಕೃಷ್ಣನಿಗಾಗಿ ಕಾದು ಕುಳಿತಿದ್ದನು. ಅವನು ಕಂಸನ ದೂತ. ಇಲ್ಲಿಗೂ ಬಿಡದೆ ಬಂದಿದ್ದನು. ಯಾರೂ ಇವನನ್ನು ಗಮನಿಸಲಿಲ್ಲ. ಕೃಷ್ಣನು ಅರಿಯದೆ ನೀರಿನ ಬಳಿ ಬಂದ ತಕ್ಷಣವೇ ಬಕಾಸುರನು ನೆಗೆದು ಬಂದು ಕಣ್ಣು ಮುಚ್ಚಿ ಬಿಡುವಷ್ಟರಲ್ಲಿ ಕೃಷ್ಣನನ್ನು ನುಂಗಿಯೇ ಬಿಟ್ಟನು. ಈ ಭಯಂಕರ ದೃಶ್ಯ ವನ್ನು ನೋಡಲಾರದೇ ಬಲರಾಮ ಮತ್ತು ಇತರರು ಮೂರ್ಛೆ ಹೋದರು. ಕೃಷ್ಣನು ಪರಮಾತ್ಮಸ್ವರೂಪನಾದುದರಿಂದ ತನ್ನ ತೇಜಸ್ಸನ್ನು ಸಂಘಟಿಸಿ ಅಗ್ನಿಯಾಗಿ ಮಾರ್ಪಟ್ಟನು.

ಒಡನೆಯೇ ಬಕಾಸುರನ ಗಂಟಲು ಉರಿಯತೊಡಗಿತು. ಹಿಂಸೆ ತಾಳಲಾರದೆ ಥುಪ್ಪನೆ ಕೃಷ್ಣನನ್ನು ಹೊರಕ್ಕೆ ಉಗುಳಿದನು. ಮತ್ತೆಯೂ ಕೃಷ್ಣನನ್ನು ಬಿಡಲಿಲ್ಲ. ಈಸಲ ಕೃಷ್ಣನು ಅಪೂರ್ವ ಶಕ್ತಿಯಿಂದ ಬಕಾಸುರನ ಕೊಕ್ಕುಗಳನ್ನು ಕಾಲಿನಿಂದ ಒಂದನ್ನು ಮೆಟ್ಟಿ ಕೈಯಿಂದ ಮೇಲಿನದನ್ನು ಹಿಡಿದು ಬಟ್ಟೆಯನ್ನು ಹರಿಯುವಂತೆ ಸೀಳಿಬಿಟ್ಟನು. ಈ ರೀತಿ ಮತ್ತೊಬ್ಬ ಅಸುರನು ಪುಟ್ಟಕೃಷ್ಣನ ಕೈಗಳಿಂದ ಮರಣ ಹೊಂದಿದನು. ಆಮೇಲೆ ತನ್ನ ಅಮೃತ ಹಸ್ತಗಳಿಂದ ಮೂರ್ಛೆ ಹೊಂದಿದ ಗೆಳೆಯ ರನ್ನು ಎಬ್ಬಿಸಿ ಸಂತೋಷದಿಂದ ಆಟವಾಡುತ್ತಾ ಮನೆಗೆ ಹಿಂದಿರುಗಿದನು.

ಈ ಕತೆಯನ್ನು ಕೇಳಿದಮೇಲಂತೂ ಬೃಂದಾವನದ ಜನರೆಲ್ಲರಿಗೂ ಕೃಷ್ಣನು ಪರಮಾತ್ಮನ ಅವತಾರವೇ ಎಂದು ನಂಬಿಕೆ ಹುಟ್ಟಿತು. ಅಲ್ಲದೆ ಮತ್ತಾರಿಗೆ ತಾನೇ ಅಂತಹ ಕೆಲಸ ಸಾಧ್ಯ? ಚಿತ್ರದಲ್ಲಿ ಬಕಾಸುರನು ಅರಿಯದ ಕೃಷ್ಣನನ್ನು ನುಂಗಲು ನುಗ್ಗುತ್ತಿರುವುದನ್ನು ಕಾಣಬಹುದು.




ಸಂಪುಟ ೩ | ಸೆಪ್ಟೆಂಬರ್ ೧೯೪೯ | ಸಂಚಿಕೆ ೩

## ಬರುತಾನೆ—ಇವನಾರಪ!

೧

ಸೊಂಡಿಲಿನ ಆ ಮುಖಕೆ
ಕಿವಿಯೆರೆಡು ಬೀಸುತಿವೆ!
ಸೊಂಡಿಲಲ್ಲಾಡುತ್ತಿದೆ!–ಎಡಬಲಕೆ–
ಗುಂಡು ಮೈ ಮಾಲುತ್ತಿದೆ!
ಕಬ್ಬು ಕೋಲೂರುತ್ತ ಇಲಿಯೇರಿ
ಬರುತಾನೆ–ಇವನಾರಪ!

೨

ಕಬ್ಬುಂಟು ಬಲಗೈಲಿ
ಲಡ್ಡುಂಡೆ ಎಡಗೈಲಿ
ಮತ್ತೆರಡು ಕೈಗಳನು, ನೀಡುತಲಿ–
ಸಿಕ್ಕಿದ್ದು ಮುಕ್ಕುತಲೀ–ಇಲಿಯೇರಿ–
ಬರುತಾನೆ–ಇವನಾರಪ!

೩

ಹೊಟ್ಟೆ ಬೆಟ್ಟದ ತೂಕ–
ಪುಟ್ಟ ಇಲಿ ಮೇಲಿಟ್ಟು
ಥರ್‍ರೆಂದು ತೇಗು ಬಿಡುತ, ನಮ್ಮೆಲ್ಲ–
ವಿಘ್ನಗಳ ಪರಿಹರಿಸುತ, ಇಲಿಯೇರಿ–
ಬರುತಾನೆ–ಇವನಾರಪ!

೪

ಓ! ಇವನೆ ಬೆನಕಪ್ಪ!
ಓ! ಇವನೆ ಗಣಪಪ್ಪ!
ಓ! ಇವನೆ ವಿಘ್ನೇಶ್ವರ! ಈಶ್ವರನ–
ಪ್ರಿಯಕುವರ ಸಿದ್ಧೇಶ್ವರ! ಇಲಿಯೇರಿ–
ಬರುತಾನೆ ಲಂಬೋದರ!

—"ನವಗಿರಿನಂದ"

# ಆಡು ಮರಿ

ಮರಿ! ಮರಿ! ಆಡು ಮರಿ !
ನಿನ್ನ ನೋಡಿ ಮೋದ ಬರಿ.
ಅಹಾ, ಏನು ಷೋಕು!
ಏನು ನೋಟ!
ಏನು ಆಟ!
ಏನು ಓಟ!

ತಾಯಿ ಒಡಲು ಎಂಬ ಜೈಲಿ
ನಿಂದ ಬಿಡುವು ಸಿಕ್ಕಿತು
ಕಣ್ಣು ಮುಚ್ಚಿ ಮುದುರಿಕೊಂಡು
ಕೆಳಗೆ ಬಿದ್ದು ನೋಯಿತು.
ಗಾಯವಾದ ಜಾಗವೆಲ್ಲಿ?
ಮಾಯವಾದ ಕೂಪವೆಲ್ಲಿ?
ಹಿಂದಿನಿಂದ ಎಲ್ಲ ಮರೆತೆ
ಅಂದಿನಿಂದ ಜಗವನರಿತೆ
ಹೊಸ ಪ್ರಪಂಚ,
ಹೊಸ ವಿನೋದ,
ವಿವಿಧ ನೋಟ,
ಕೊರಳ ನಾದ,
ಎಲ್ಲ ಹೊಸದು, ತಾನು ಹಳಬ
ಎಂದು ತಿಳಿದೆಯಲ್ಲವೆ?
ಮರಿ! ಮರಿ! ಆಡು ಮರಿ!
ನಿನ್ನ ನೋಡಿ ಮೋದ ಬರಿ.

* * *

ಧರೆಗೆ ಬಂದು ಎರಡೆ ದಿನ
ಕಳೆವುದರೊಳಗೆಷ್ಟು ಮಾನ!
ತಾತ ಯಾರು
ತಂದೆ ಯಾರು
ಹಿಂದೆ ಏನು
ಮುಂದೆ ಎಂತು
ಎಂಬ ಚಿಂತೆ
ಎಂಬ ದುಃಖ
ಎಲ್ಲ ಬಿಟ್ಟು ಆಟ ಮಗ್ನ.

ಇಲ್ಲಿ ಬಿದ್ದು ಅಲ್ಲಿ ಎದ್ದು
ಹಾರಿ ಹೊರಟು ಚಿಮ್ಮಿ ನೆಗೆದು
ಇಲ್ಲಿ ನೋಡಿ ಅಲ್ಲಿ ಮೂಸಿ
ತಾಯಿ ಮೊಲೆಯನುಂಡು ನಲಿದು
ಯಾರ ಹಂಗು ತನಗೆ ಇಲ್ಲ
ಸುತ್ತಲಿಹುದೆ ತನ್ನದೆಲ್ಲ

ಆಚಾರ್ಯ, ಮದರಾಸು.

ಎಂಬ ನೋಟ!
ಎಂಬ ಜಂಬ!
ಏನು ನೆಗೆತ!
ಏನು ಕುಣಿತ!
ಇದೆಲ್ಲವನ್ನು ಎಲ್ಲಿ ಕಲಿತೆ?
ಆಡು ಮರಿ! ಆಡು ಮರಿ!
ನಿನ್ನ ನೋಡಿ ಮೋದ ಬರಿ.

ಮನಕೆ ಬಂದ ಸಮಯದಲ್ಲಿ
ಕುಡಿವುದಕ್ಕೆ ಹಾಲು ಸಿಕ್ಕಿ
ತಾಯಿ ಮೇಲೆ ಹತ್ತಿ ಇಳಿದು
ಸುತ್ತು ಸುತ್ತಿ ನೆಗೆದು ನಲಿದು
ತನ್ನ ಇರವೆ ಮರೆತೆಯ?

* *

ಏನು ಬೇಕು, ಏನು ಇಲ್ಲ
ಅದೆಲ್ಲ ಮನಕೆ ಒಂದು ಇಲ್ಲ
ಎದ್ದ ಹಣೆ!
ಮುಗ್ಧ ನೋಟ!
ಮುದ್ದು ಕಾಲು!
ಚೆಂದ ಮಾಟ!
ಮರಿ! ಮರಿ! ಆಡು ಮರಿ!
ನಿನ್ನ ನೋಡಿ ಮೋದ ಬರಿ.

* *

ಮಕ್ಕಳೆಲ್ಲ ನಿನ್ನ ಕೂಡಿ
ಸರಸವಾಡಲಾಶಿಸುವರು
ನಿನ್ನ ಬಳಗವಲ್ಲವೆಂಬ
ಪುಟ್ಟದೇಹ ಪಿಡಿವರೆಂಬ ಭೀತಿಯೆ!
ನಯವು ಏಕೆ! ಭಯವು ಏಕೆ?
ಸುತ್ತ ನೋಡಿ ನಲಿವುದೇಕೆ?
ತಾಯಿ ಮರೆಗೆ ಹೋಗಲೇಕೆ?
ಮತ್ತೆ ಇಣಿಕಿ ನೋಡಲೇಕೆ?
ಆಟ ಚಂದ
ನೋಟ ಚಂದ
ಮಾಟ ಚಂದ
ಓಟ ಚಂದ
ಒಟ್ಟನಲ್ಲಿ ನೀನೆ ಚಂದ
ಮರಿ! ಮರಿ! ಆಡು ಮರಿ
ನಿನ್ನ ನೋಡಿ ಮೋದ ಬರಿ.



# ಅಕಬರ  ಬೀರಬಲ

ಒಂದುದಿನ ಅಕಬರನು ಸಭೆಯಲ್ಲಿದ್ದನು.

ಬೀರಬಲನೂ ಹಾಜರು ಎಂದು ಬೇರೆ ಹೇಳಬೇಕೇ? ಅಕಬರನು ಏನೋ ಯೋಚಿಸುತ್ತಾ "ಬೀರಬಲ್! ಉಪಕಾರವನ್ನು ಮರೆಯದ ಪ್ರಾಣಿ, ಉಪಕಾರವನ್ನು ಮರೆಯುವ ಪ್ರಾಣಿ ಎರಡನ್ನೂ ನಾಳೆ ನಮ್ಮ ಬಳಿಗೆ ತರಬೇಕು" ಎಂದು ಹೇಳಿದನು.

ಎಲ್ಲದಕ್ಕೂ ಆಗಲಿ ಎಂದು ಹೇಳುತ್ತಿದ್ದ ಬೀರಬಲನು ಈಗ ಏನೂ ತೋರದೆ ಸುಮ್ಮನಿದ್ದುಬಿಟ್ಟನು. ಚಕ್ರವರ್ತಿಗೆ ಕೋಪ ಬಂತು. "ನಾಳೆ ಸಾಯಂಕಾಲದವರೆಗೂ ಗಡುವು ಕೊಟ್ಟಿರುವೆ. ಅಷ್ಟರೊಳಗೆ ನಮ್ಮ ಆಜ್ಞೆಯನ್ನು ಪಾಲಿಸದಿದ್ದರೆ ನಿನಗೆ ಕ್ರೂರ ಶಿಕ್ಷೆ ವಿಧಿಸಲಾದೀತು." ಎಂದು ಎಚ್ಚರಿಸಿದನು. ಇದನ್ನು ಕೇಳಿ ಎಲ್ಲರೂ ನಡುಗಿಹೋದರು. ಚಕ್ರವರ್ತಿಯ ಕೋಪ ಸಾಮಾನ್ಯವೇ? ಬೀರಬಲನ ವಿರೋಧಿಗಳೆಲ್ಲರೂ ಸಂತೋಷಪಟ್ಟರು. ಏಕೆಂದರೆ 'ಬೀರಬಲನು ಆಜ್ಞೆಯನ್ನು ಪಾಲಿಸಲಾರದೇ ಸಾಯುವುದೇ ಸಿದ್ಧ' ಎಂದು ನಿಶ್ಚಯಿಸಿದರು. ಸಭೆ ಮುಗಿಯಿತು. ಒಡನೆ ಎಲ್ಲರೂ ಹೊರಟುಹೋದರು.

ಬೀರಬಲನು ಮನೆ ಸೇರುವ ಹೊತ್ತಿಗೆ ಯೋಚಿಸಿ ಯೋಚಿಸಿ ತಲೆ ಕೆಟ್ಟಿತ್ತು. ಬೀರಬಲನ ಮಗಳು ಈ ವಿಚಾರವನ್ನು ಹೇಗೋ ತಿಳಿದಳು. ಅವಳೂ ಸಾಮಾನ್ಯಳು ಎಂದು ತಿಳಿಯಬೇಡಿರಿ. ತಂದೆಯಂತೆ ಮಗಳು ಅಲ್ಲವೇ? ಹಾಗೆಯೇ ಅವಳೂ ಬುದ್ಧಿಶಾಲಿ. ತಂದೆಯ ಬಾಯಿಂದಲೇ ವಿಚಾರವನ್ನೆಲ್ಲಾ ಹೊರಗೆಡಹಿದಳು.

"ಅಪ್ಪಾ! ಈ ಅಲ್ಪ ವಿಚಾರಕ್ಕೆ ನೀವು ಇಷ್ಟು ಯೋಚಿಸಬೇಕೆ? ದಿಗಿಲುಪಡಬೇಕಾಗಿಲ್ಲ. ನಾಳೆ ಮೊದಲು ಅದಕ್ಕೆ ಜವಾಬು ತಿಳಿಸುವುದು ನನ್ನ ಭಾರ. ನೀವು ನಿಶ್ಚಿಂತೆಯಿಂದಿರಿ." ಎಂದು ಮಗಳು ಭರವಸೆ ಕೊಟ್ಟಳು.

ತೀವ್ರಬುದ್ಧಿಯ ಬೀರಬಲನಿಗೆ ನಿಜವಾಗಿ ಅದೇನೂ ದೊಡ್ಡ ಕೆಲಸವಾಗಿರಲಿಲ್ಲ. ಆದರೆ ಚಕ್ರವರ್ತಿಯ ಕೋಪ? ಗ್ರಹಚಾರ ಹೇಗಿರುವುದೋ! ಎಂದು ಭಯ ಹುಟ್ಟಿಸಿತ್ತು. ಮಗಳ ಚಾತುರ್ಯ ಬೀರಬಲನಿಗೆ ಗೊತ್ತು ಅದಕ್ಕಾಗಿ ನಿಶ್ಚಿಂತೆಯಿಂದ ಮಲಗಿದನು.

ಮಾರನೆಯ ದಿವಸ ದರ್ಬಾರಿಗೆ ಹೋಗುವಾಗ ಬೀರಬಲನು ತನ್ನ ಅಳಿಯನನ್ನೂ

ದಾ ಮೂ

ಒಂದು ನಾಯಿಯನ್ನೂ ಜೊತೆಗೆ ಕರೆದು ಕೊಂಡು ಹೊರಟನು. ದರ್ಬಾರಿಗೆ ಹೋದ ಒಡನೆ ಎಲ್ಲರೂ ಇವರನ್ನು ನೋಡಿ ಆಶ್ಚರ್ಯ ಪಡುವವರೇ. ಆ ಬಡಕಲ ನಾಯಿ, ವಿಚಿತ್ರ ವೇಷದ ಅಳಿಯ; ಅವರನ್ನು ನೋಡಿ ಬೀರ ಬಲನಿಗೆ ಬುದ್ಧಿಯು ವಿಪರೀತವಾಯಿತೋ ಎಂದು ಸಂದೇಹಪಡುವವರೇ. ಅಕಬರನು ದರ್ಬಾರಿನಲ್ಲಿ ಬಂದು ಕುಳಿತನು. ಬೀರ ಬಲನು ಪಾದುಷಹನಿಗೆ ಬಗ್ಗಿ ಸಲಾಮು ಮಾಡಿ "ಪ್ರಭುಗಳು ಪರಾಂಬರಿಸಬೇಕು. ತಮ್ಮ ಅಪ್ಪಣೆ ಪಾಲಿಸಿದ್ದೇನೆ." ಎಂದು ಬಿನ್ನೈಸಿದನು. ಅಕಬರನು ನೋಡಿದುದು ನಾಯಿ ಮಾತ್ರ. ಇನ್ನೊಂದು ಪ್ರಾಣಿಯನ್ನು ಕಾಣದೇ "ಏನು ಬೀರಬಲ್! ನನ್ನನ್ನೇ ಪರಿಹಾಸ ಮಾಡುವಿಯಾ?" ಎಂದು ಕೇಳಿದನು.

"ಪ್ರಭುಗಳು ಪರಿಶೀಲಿಸಬೇಕು. ಇದು ಪರಿಹಾಸವಲ್ಲ. "ಇಗೋ ಈ ನಾಯಿಯೊಂದು. ಕೃತಜ್ಞತೆಯೆಂಬುದು ಇದರಲ್ಲಿರುವಷ್ಟು ಮತ್ತಾರಿಗೂ ಇಲ್ಲ. ಹಿಡಿ ಅನ್ನ ಕೊಟ್ಟರೆ,ಪ್ರಾಣ ಹೋಗುವವರೆಗೂ ಮರೆಯದೇ ಯಜಮಾನನನ್ನೇ ಪ್ರೀತಿಸುವುದು.

ಇಗೋ ಉಪಕಾರ ಮರೆಯುವ ಪ್ರಾಣಿಯೆಂದರೆ ಈ ಅಳಿಯ. ಅಳಿಯಂದಿರುಗಳಿಗೆ ಕನಕಾಭಿಷೇಕ ಮಾಡಿದರೂ ತೃಪ್ತಿಯೆಂಬುದೇ ಇಲ್ಲ. ಕೃತಜ್ಞತೆ ಮೊದಲೇ ಇಲ್ಲ." ಎಂದು ಬೀರಬಲ್ ಉತ್ತರ ಹೇಳಿದನು. ಬಾದಶಹನು ಥಟ್ಟನೆ "ಉಪಕಾರ ಮರೆಯುವ ಪ್ರಾಣಿ ನಮ್ಮ ಆಸ್ಥಾನದಲ್ಲಿ ಇರಕೂಡದು. ಆದ್ದರಿಂದ ಆತನ ತಲೆ ಕಡಿಸಬೇಕು. ಏನು ಹೇಳುವಿ" ಎಂದನು.

ಯುಕ್ತಿಪರನಾದ ಬೀರಬಲ್ ತಡ ಮಾಡದೆಯೇ, "ಪ್ರಭುಗಳು ತಾವೂ ಕೂಡ ಒಂದು ಮನೆಗೆ ಅಳಿಯಂದಿರೇ ಎಂಬ ವಿಚಾರ ಮರೆಯಬಾರದು. ಆಗ ತಮ್ಮ ಆಜ್ಞೆ ತಮಗೂ ವರ್ತಿಸುವುದು." ಎಂದು ಧೈರ್ಯದಿಂದ ಹೇಳಿದನು.

ಈ ಜವಾಬಿಗೆ ಚಕ್ರವರ್ತಿ ತಾನೇ ಏನು ಹೇಳಬಲ್ಲನು. "ಶಾಬಾಸ್ ಬೀರಬಲ್, ನಿನ್ನ ಮಾತು ಒಪ್ಪಬೇಕಾದ್ದೇ" ಎಂದು ಸಂತೋಷಿಸಿ ಅನೇಕ ಬಹುಮಾನಗಳನ್ನು ಕೊಟ್ಟು ಸತ್ಕರಿಸಿದನು.



# ರೈಲು ಗಾಡಿ

ನಾಣಿ ಪುಟ್ಟು ಬಾಬು ಕಿಟ್ಟು
ರೈಲ ಆಟವಾಡಲೆಂದು,
ಎಲ್ಲ ಒಂದುಗೂಡಿದರು.
ರೈಲು ಮಾಡಿ ಹೊರಟರು.

ಎಂಜಿನನ್ನು ಕೂಡಿಸಲು,
ಯಾರು ಮುಂದೆ ಬರುವಿರೆನಲು,
ನಾನು ಮುಂದೆ ತಾನು ಮುಂದೆ
ಎಂದು ಜಗಳವಾಡಿದರು.

ಗಾಡಿಯಾಗರೊಬ್ಬರಿಲ್ಲ,
ಎಂಜಿನ್ನುಗಳೈದು ಆರು!
ರೈಲ ಗತಿಯು ಹೀಗಿರಲು
ಹಟವ ಹಿಡಿದು ಕುಳಿತರು.

ಕೂತು ಕೂತು ಸಾಕು ಆಗಿ
ಮುಚ್ಚಂಜೆಯಾಗುತಿರಲು,
ಆಟ ಆಡಿ ಮುಗಿಸಲೆಂದು
ಎಲ್ಲ ಮತ್ತೆ ಎದ್ದರು.

ಅಂತು ಇಂತು ರೈಲ ಕಟ್ಟಿ
ದಾರಿಯಲ್ಲಿ ಹೋಗುತಿರಲು,
ಹಿರಿಯರೊಬ್ಬರಡ್ಡ ಬರಲು,
ರೈಲು ಅಲ್ಲೆ ನಿಂತಿತು!

ಕೊಂಚ ದೂರ ಹೋಗಲಲ್ಲಿ
ಗಾಡಿಯೊಂದು ಕಾಲಿನಲ್ಲಿ
ಚುಚ್ಚಿಕೊಂಡ ಮುಳ್ಳು ತೆಗೆಯ-
-ಲಲ್ಲೆ ಕಂಬಿ ಬಿಟ್ಟಿತು.

ಪುನಃ ರೈಲು ಹೋಗುತಿರಲು
ಇನ್ನು ಕೊಂಚ ದೂರದಲ್ಲಿ
ತನ್ನ ಅಮ್ಮ ಕರೆದಳೆಂದು
ಒಂದು ಗಾಡಿ ಓಡಿತು!!

ಇನ್ನು ಕೊಂಚ ದೂರ ಹೋಗಿ
ಊರ ಸೇರಲಿರಲು ರೈಲು
ಕಲ್ಲನೆಡವಿ ಎಂಜಿನ್ನು
ಮುಗ್ಗರಿಸಿಯೆ ಬಿದ್ದಿತು!!!

ಮಂಡಿಗೆಲ್ಲ ಏಟು ಬಿದ್ದು,
ಹಿಂದಿನಿಂದ ತನ್ನ ಮೇಲೆ
ಗಾಡಿಯೊಂದು ಮಗುಚಿರಲು,
ಮೈಯ್ಯು ಮಣ್ಣ ಹೊತ್ತಿರಲು,

"ಅಯ್ಯೋ ಸತ್ತೆ!" ಎಂದುಕೊಂಡು
ಬಾಯ್ ಬಡಿದು ಅರಚಿಕೊಂಡು
ಎದ್ದು ಬಟ್ಟೆ ಕೊಡವಿಕೊಂಡು
ಅಳುತ ಓಡಿತೆಂಜಿನ್ನು!!!!

'ಸಂಪತ್ಕುಮಾರ'

# ಚಂದಮಾಮ

ಚಂದ್ರನಂತೆ ಜಗದಿ ಬೆಳಗು ಚಂದಮಾಮ
ಅಂದದಿಂದ ಮೆರೆಯುತಿರುವೆ ಚಂದಮಾಮ
ಕಂದಗಳನು ನಲಿಸುತಿರುವೆ ಚಂದಮಾಮ
ಸುಂದರ ತ್ರಿವರ್ಣ ಚಿತ್ರ ತರುವೆ ಮಾಮ.
ನೀತಿಯನ್ನು ಲೀಲೆಯಿಂದ ಕಲಿಸು ಮಾಮ
ಪ್ರಿತಿಯಿಂದ ಜಗವನೆಲ್ಲಾ ಒಲಿಸು ಮಾಮ
ಖ್ಯಾತಿಯನ್ನು ಪಡೆದು ಬಾಳು ಚಂದಮಾಮ
ಹಿತದಿ ಮಿತದಿ ಕೂಡಿರುವೆ ಚಂದಮಾಮ.
ಕಥಾ ಕವಿತೆ ಒಗಟು ಕಲಿಪೆ ಚಂದಮಾಮ
ರಥದಂತೆ ಜಗದಿ ನೀನು ಚಲಿಸು ಮಾಮ
ಸತತ ಬಾಲಕರಿಗೆ ನೀನು ಚಂದಮಾಮ
ಹಿತದ ಪಥವ ತೋರಿಕೊಡುವೆ ಚಂದಮಾಮ.
ಆಂಧ್ರ, ತಮಿಳು, ಕನ್ನಡದಿ ಮೆರೆವ ಚಂದಮಾಮ
ಚಂದ್ರನಂತೆ ಬೆಳೆದು ಚಲಿಸು ಚಂದಮಾಮ
ಇಂದ್ರನಂತೆ ಪದವಿ ಪಡೆ ಚಂದಮಾಮ
ಇಂದು ಧರ್ಣನ ದಯದಿ ಬಾಳು ಚಂದಮಾಮ.

ಎಸ್. ಶೀಕ್ ಮಹಮದ್, ಭದ್ರಾವತಿ.



ಸಿದ್ಧಿ ವಿನಾಯಕ




ಹುಲಿ, ನರಿ, ಈರೀತಿ ಮಾತನಾಡಿಕೊಂಡವು. "ಹುಲಿಯಪ್ಪ, ಹುಲಿಯಪ್ಪ! ನನಗೆ ನಾಳೆ ಹಬ್ಬ. ಹೇಗೆ ಗೊತ್ತೋ? ರಾಜಕುರುವೆದ್ದು ಆರು ತಿಂಗಳಿಂದ ಚಿಲಕವಾದಿ ಪಟ್ಟಣದ ರಾಜಕುಮಾರಿ ಬಾಧೆ ಪಡುತ್ತಿರುವಳು. ನಾಳೆ ಅವಳು ಕಾಲವಾಗುವಳು. ನನಗೆ ಹಬ್ಬದೂಟ." ಎಂದಿತು ನರಿ.

"ನರಿಯಣ್ಣ, ರಾಜಕುರುವಿಗೆ ಔಷಧಿ ಇಲ್ಲವೇ?" ಎಂದು ಕೇಳಿತು ಹುಲಿ.

"ಇಲ್ಲದೇನು? ಈ ದೇಗುಲದಮೇಲೆ ಏಳು ಎಲೆಗಳ ಒಂದು ಸಸಿ ಇದೆ. ಆ ಎಲೆಗಳನ್ನು ಕುರುವಿನ ಮೇಲಿಟ್ಟು ಕಟ್ಟಿದ ಮೂರನೇ ದಿನ ತೆಗೆದು ನೋಡಿದಲ್ಲಿ ಕುರುವಿದ್ದ ಜಾಗವೇ ಕಾಣಿಸದು!"

ಈ ಮಾತುಗಳನ್ನೆಲ್ಲಾ ಆಲಿಸುತ್ತಿದ್ದ ಬಾಲಕ. ಬೆಳಕು ಹರಿಯುವ ಮುಂಚೆ ಎದ್ದು ನರಿ ಹೇಳಿದ ಗಿಡದ ಎಲೆಗಳನ್ನು ಕಿತ್ತುಕೊಂಡ. ಅವನ್ನು ತನ್ನ ಧೋತರದಲ್ಲಿ ಕಟ್ಟಿಕೊಂಡು ಹೊತ್ತಿಗೆ ಮುಂಚೆ ಚಿಲಕವಾದಿ ಪಟ್ಟಣವನ್ನು ಸೇರಿ, ಅಲ್ಲಿ ಒಬ್ಬ ಅಡಗೂಲಜ್ಜಿಯ ಮನೆಗೆ ಹೋದ. "ಅಜ್ಜೀ, ಒಂದು ವರಹ ಕೊಡುತ್ತೇನೆ. ಬೇಗೆ ಅಡಿಗೆ ಮಾಡಿಡು." ಎಂದ ಬಾಲಕ. "ಅಯ್ಯೋ, ಅಪ್ಪಾ, ಈಗ ಅಡಿಗೆ ಮಾಡುವ ಸ್ಥಿತಿಯಲ್ಲಿದ್ದೇನೆಯೇ? ನಮ್ಮ ರಾಜಕುಮಾರಿಗೆ ರಾಜಕುರು ಎದ್ದು ಈಗಲೋ, ಆಗಲೋ ಅನ್ನುವ ಸ್ಥಿತಿಯಾಗಿದೆ. ನಾನು ಅಲ್ಲಿಗೆ ಹೋಗಬೇಕು. ನೀನು ಇನ್ನು ಎಲ್ಲಾದರೂ ಊಟಕ್ಕೆ ಹೋಗು." ಎಂದಳು ಆಕೆ. "ನನಗಿಷ್ಟು ಊಟವಿಟ್ಟರೆ ನಿಮ್ಮ ರಾಜಕುಮಾರಿಯ ವ್ಯಾಧಿಯನ್ನು ನಾನೇ ಗುಣಪಡಿಸುವೆನಲ್ಲಾ!" ಎಂದ ಬಾಲಕ.

"ಹೋ, ದೊಡ್ಡ ದೊಡ್ಡ ವೈದ್ಯರೇ ಗುಣಪಡಿಸಲಾರದ ಬೇನೆಯನ್ನು ನೀನು ಪರಿಹರಿಸುವೆಯಾ?.... ಅಷ್ಟು ಹಸಿವೆ ಆಗಿದ್ದರೆ ತಂಗಳನ್ನವಿದೆ. ಅದನ್ನು ಬೇಕಾದರೆ ತಿನ್ನು." ಎಂದು ಅಜ್ಜಿ ಬಾಲಕನಿಗೆ ರಾತ್ರಿ ಉಳಿದಿದ್ದ ಅನ್ನವನ್ನಿಟ್ಟಳು.



ಮೇಲೆ ಧೋತರದಲ್ಲಿ ಗಂಟು ಹಾಕಿಕೊಂಡು ಬಂದಿದ್ದ ಏಳು ಎಲೆಗಳನ್ನಿಟ್ಟು ಕಟ್ಟು ಕಟ್ಟಿದ.

ಆ ದಿನ ರಾಜಕುಮಾರಿ ಸಾಯಲಿಲ್ಲ. ವೈದ್ಯರು ನಾಡಿ ನೋಡಿ "ಇನ್ನೂ ಪ್ರಾಣ ವಿದೆ. ಇಂದು ಪರವಾಯಿಲ್ಲ" ಎಂದರು. ಎರಡನೇ ದಿನವೂ ನಾಡಿ ಚಲಿಸುತ್ತಿತ್ತು. ರಾಜಕುಮಾರಿ ಮತ್ತೊಂದು ದಿನವೂ ಬದು ಕುವಳೆಂದು ಹೇಳಿದರು ವೈದ್ಯರು.

ಮೂರನೇ ದಿನ ಬೆಳಗ್ಗೆ ಬಾಲಕನು ರಾಜ ಕುಮಾರಿಯ ಕಟ್ಟುಗಳನ್ನು ಬಿಚ್ಚಿಸಿದ. ಹುಣ್ಣಿನ ಗುರತೇ ಕಾಣಿಸಲಿಲ್ಲ. ಎಲ್ಲರೂ ಆಶ್ಚರ್ಯ ಹೊಂದಿದರು. "ನಿನ್ನನ್ನು ಆ ಭಗ ವಂತನೇ ಕಳುಹಿಸಿದ. ನೀನು ಸಾಮಾನ್ಯ ನಲ್ಲ." ಎಂದು ರಾಜ ಹೊಗಳಿದ. ಪ್ರಜೆಗಳೆಲ್ಲಾ ಸಂತೋಷವನ್ನು ತಡೆಯ ಲಾರದೆ ಬಾಲಕನನ್ನು ನೋಡಲು ತವಕ ಗೊಂಡರು. ಎಲ್ಲರೂ ನೋಡಲವಕಾಶವಾಗು ವಂತೆ ರಾಜನು ತನ್ನ ಮಗಳನ್ನೂ ಬಾಲವದ್ಧಿ ರಾಜನನ್ನೂ ಪಲ್ಲಕ್ಕಿಯಲ್ಲಿ ಕೂರಿಸಿ, ಮೇಳ ತಾಳಗಳೊಂದಿಗೆ ಎಲ್ಲ ಬೀದಿಗಳಲ್ಲೂ ಮೆರ ವಣಿಗೆ ಮಾಡಿಸಿದ.

ಬಾಲಕನು ಹದಿನೈದು ದಿನಗಳನ್ನು ರಾಜನ ಅರಮನೆಯಲ್ಲಿ ಕಳೆದು ಇನ್ನು ತಾನು ಹೊರಡಲು ಅಪ್ಪಣೆ ಬೇಡಿದ.

"ಮಗು, ನನ್ನ ಮಗಳನ್ನು ಬದುಕಿಸಿ ದವನು ನೀನು. ಅವಳನ್ನು ನೀನೇ ಮದುವೆ ಯಾಗು" ಎಂದ ರಾಜ.

"ಅಜ್ಜೀ, ನಿನ್ನೊಂದಿಗೆ ನಾನೂ ಕೋಟೆ ಯೊಳಗೆ ಬಂದು ರಾಜಕುಮಾರಿಗೆ ವೈದ್ಯ ಮಾಡುವೆನು. ನನ್ನನ್ನೂ ಕರೆದುಕೊಂಡು ಹೋಗುವಿಯಾ?" ಎಂದು ಕೇಳಿದ ಬಾಲಕ. ಅಜ್ಜಿ ಸರಿ ಎಂದು ಕರೆದುಕೊಂಡು ಹೋದಳು.

ಆಗಾಗಲೇ ರಾಜಕುಮಾರಿಯನ್ನು ಕೆಳಗೆ ಮಲಗಿಸಿಬಿಟ್ಟಿದ್ದರು. ವೈದ್ಯರು ನಾಡಿ ಕ್ಷೀಣಿ ಸುತ್ತಿದೆ ಎಂದರು. ಬಾಲಕನು ರಾಜನನ್ನು ಕುರಿತು ರಾಜಕುಮಾರಿಯ ಕುರುವನ್ನು ತೋರಿಸುವಂತೆ ಕೇಳಿದನು. ರಾಜನಿಗೆ ಅನುಮಾನ, ಹುಡುಗನೇನು ಮಾಡಬಲ್ಲ ಎಂದು. ಒತ್ತಾಯದಮೇಲೆ ಬಾಲಕನಿಗೆ ತನ್ನ ಮಗಳ ಕುರುವನ್ನು ತೋರಿಸಿದ. ಬಾಲಕನು ಆ ಹುಣ್ಣನ್ನು ತೊಳೆಸಿ, ಅದರ



ಬಾಲಕನು ತನ್ನ ವಿಷಯವನ್ನೆಲ್ಲಾ ತಿಳಿಸಿ ನಾಗರಗುಡ್ಡದಿಂದ ತನ್ನ ತಾಯಿಯನ್ನು ಬಿಡಿಸಿಕೊಂಡು ಹಿಂದಿರುಗಿ ಬರುವಾಗ ಅವಳನ್ನು ಮದುವೆಯಾಗುವೆನೆಂದು ಒಪ್ಪಿಸಿ ರಾಜನಿತ್ತನಗನಾಣ್ಯಗಳನ್ನು ತೆಗೆದುಕೊಂಡು ನಯನವಾದಿಪಟ್ಟಣವನ್ನು ಸೇರಿದ. ಅಲ್ಲಿ ಊಟ ಮುಗಿಸಿಕೊಂಡು ನಾಗರಗುಡ್ಡದ ಬುಡಕ್ಕೆ ಬಂದ. ದೂರದಲ್ಲಿ ಮಸೀದಿ ಕೋಟೆ ಕಾಣಿಸಿತು.

'ಆ ಮಸೀದಿಯಲ್ಲೇ ನಮ್ಮ ತಾಯಿ ಸೆರೆಯಾಗಿರಬಹುದು'. ಎಂದು ಅಂದುಕೊಂಡ ಬಾಲಕ. ಆ ಕೋಟೆಯ ಸುತ್ತಲೂ ಶಿಲೆಗಳಾಗಿ ಬಿದ್ದಿದ್ದ ಪಿತೃಗಳನ್ನು ನೋಡಿದ. ರಕ್ತ ಬಿಸಿಯೇರಿತು.

ಹೀಗೆ ಗುಡ್ಡವನ್ನು ಸಮೀಪಿಸುತ್ತಿರುವಲ್ಲಿ ಮಾಯಾಫಕೀರನು ಆ ಗುಡ್ಡದ ಬುಡದಲ್ಲಿ ಕಾವಲಿಗಾಗಿ ನೇಮಿಸಿದ್ದ ರಾಕ್ಷಸಿಯು ಆತನನ್ನು ನೋಡಿದಳು. ಕೂಡಲೇ ಹದಿನಾರು ವರ್ಷದ ತರುಣಿಯ ವೇಷವನ್ನು ಧರಿಸಿ ಕುಣಿಯುತ್ತಾ ನಲಿಯುತ್ತಾ ಮುಗುಳು ನಗೆ ಬೀರುತ್ತಾ ಬಾಲಕನ ಎದುರಾಗಿ ಬಂದಳು. ಅವಳನ್ನು ನೋಡಿ ಬಾಲಕನು ಅವಳೇ ಮಾಯಾರಾಕ್ಷಸಿ ಎಂದು ತಿಳಿದುಕೊಂಡನು. ಹತ್ತಿರಕ್ಕೆ ಬಂದ ಕೂಡಲೇ ಸೊಂಟಕೆ



ಸಿಕ್ಕಿಸಿದ್ದ ಚಾಕುವನ್ನು ತೆಗೆದು ಅವಳನ್ನು ಕೊಲ್ಲಲು ಸಿದ್ಧನಾದನು.

ರಕ್ಕಸಿ ಇವನ ಸ್ಥೈರ್ಯ ಕಂಡು ನಡುಗಿದಳು. "ದಮ್ಮಯ್ಯ, ನನ್ನನ್ನು ಸಾಯಿಸಬೇಡ. ನಿಮ್ಮ ತಾಯಿ ಕಾಣಿಸುವ ಉಪಾಯ ನಿನಗೆ ಹೇಳುತ್ತೇನೆ" ಎಂದಳು.

ಹಾಗಾದರೆ ನಿನ್ನನ್ನು ಪ್ರಾಣದೊಂದಿಗೆ ಬಿಡುತ್ತೇನೆ" ಎಂದ ಬಾಲಕ.

"ಈ ನಾಗರಗುಡ್ಡದ ಬುಡದಮೇಲೆ ಸಂಕರ ದೊಡ್ಡಮ್ಮನಿದ್ದಾಳೆ. ಅವಳು ಫಕೀರನಿಗೆ ದಿನವೂ ಹೂ ಹಾರ ಒದಗಿಸುವಳು. ಅವಳ ಮನೆಗೆ ಹೋಗಿ ಬಾಯಾರಿಕೆ ಎಂದು ನೀರು ಕೇಳು. ನೀನು ಯಾರು?' ಎಂದು ಕೇಳಿದರೆ, ನಿನ್ನ ತಂದೆಯ ಹೆಸರು ಸಂಕರಶರಭಯ್ಯ ಅಂತಲೂ, ನಿನ್ನ ತಾಯಿ ನಾಗಮ್ಮನೆಂತಲೂ, ನಿನ್ನ ಹೆಸರು ವೀರಯ್ಯನೆಂತಲೂ ಹೇಳು. ನಿನ್ನ ತಂದೆ ತಾಯಿ ತೀರಿಹೋದರೆಂತಲೂ ಹೇಳು. ಆಮೇಲೆ ನಿನಗೆ ನಿನ್ನ ತಾಯಿ ಕಾಣಿಸುತ್ತಾಳೆ" ಎಂದು ಹೇಳಿ ರಾಕ್ಷಸಿಯು ತನ್ನ ಕೈಯಲ್ಲಿದ್ದ ಚಿತ್ರವನ್ನು ಬಾಲಕನಿಗೆ ಕೊಟ್ಟಳು.

ಬಾಲವದ್ಧಿರಾಜ ಸಂಕರದೊಡ್ಡಮ್ಮನ ಮನೆಗೆ ಹೋದ. ಆ ರಾಕ್ಷಸಿಯು ಹೇಳಿ ಕೊಟ್ಟಪ್ರಕಾರ ಹೇಳಿದ. "ಅಯ್ಯೋ ಮೊಮ್ಮಗನೇ" ಎಂದು ದೊಡ್ಡಮ್ಮ ಬಾಲಕನನ್ನು ಅಪ್ಪಿಕೊಂಡಳು.

"ನಿಮ್ಮ ತಾಯಿ ಸೌಖ್ಯವಾಗಿದ್ದಾರೆಯೇ ಮಗು" ಎಂದು ಕೇಳಿದಳು.

"ಇಬ್ಬರೂ ತೀರಿಹೋದರು" ಎಂದ ಬಾಲಕ.

ತನ್ನ ಮಗಳೂ, ಅಳಿಯನೂ ಮರಣಿಸಿದ ವಾರ್ತೆಯನ್ನು ಕೇಳಿ ಬಹಳ ದುಃಖಪಟ್ಟಳು ದೊಡ್ಡಮ್ಮ. ಮೊಮ್ಮಗನನ್ನು ತನ್ನಹತ್ತಿರವೇ ಇರುವಂತೆ ಕೇಳಿಕೊಂಡಳು.

ಸಂಕರ ದೊಡ್ಡಮ್ಮ ದಿನವೂ ಮಾಯಾ ಫಕೀರನಿಗೆ ಹಾರ ಕಟ್ಟುತ್ತಿದ್ದಳು. ಬಾಲಕನು ಒಂದು ದಿನ "ಅಜ್ಜೀನಾನೂ ಒಳ್ಳೆ ಹಾರಗಳನ್ನು ಕಟ್ಟ ಬಲ್ಲೆ" ಎಂದ.

"ಹಾಗೋ? ಆಗಲಿ, ಕಟ್ಟು ಮಗು" ಎಂದಳು.

ಬಾಲಕನು ಮಾಯಾಫಕೀರನ ಮನಸ್ಸನ್ನು ಆಕರ್ಷಿಸುವಂತೆ ದೊಡ್ಡ ದೊಡ್ಡ

ಹಾರಗಳನ್ನು ಅನೇಕವಿಧವಾದ ಆಕಾರ ಗಳಲ್ಲಿ ಕಟ್ಟಿದ. ತನ್ನ ತಾಯಿ ಬಾಲ ನಾಗಮ್ಮನಿಗೆಂದು ಓರೆಕೋರೆಯಾದ ಒಂದು ಹಾರ ಕಟ್ಟಿ ಅದರಲ್ಲಿ ತನ್ನ ಉಂಗುರ ವನ್ನು ಸಿಕ್ಕಿಸಿದ. ಅವೆಲ್ಲವನ್ನು ಸಂಕರ ದೊಡ್ಡಮ್ಮನಮೂಲಕ ಕೊಟ್ಟು ಕಳುಹಿಸಿದ.

ಹಾರಗಳನ್ನು ನೋಡಿ ಮಾಯಾಫಕೀರ ಬಹಳ ಸಂತೋಷಪಟ್ಟು, ಯಾರು ಅವನ್ನು ಕಟ್ಟಿದರೆಂದು ಕೇಳಿದ. ತನ್ನ ಮಗಳ ಮಗ ಕಟ್ಟಿದನೆಂದು ಹೇಳಿದಳು ದೊಡ್ಡಮ್ಮ.

ಮಾಯಾಫಕೀರ ದೊಡ್ಡಮ್ಮನ ಸಂಬಳ ಹೆಚ್ಚಿಸಿ ಹುಡುಗನನ್ನು ಹುಷಾರಾಗಿ ಪಾಲಿಸುವಂತೆ ಹೇಳಿದ.

ಸಂಕರ ದೊಡ್ಡಮ್ಮ ಬಾಲನಾಗಮ್ಮನಿದ್ದ ಸ್ಥಳಕ್ಕೆ ಬಂದು ಆಕೆಯ ಹಾರ ಆಕೆಗಿತ್ತಳು.

"ನನಗೆ ಹಾರಗಳೊಂದು ಕಡಿಮೆ" ಎಂದು ಬಾಲನಾಗಮ್ಮ, ದೊಡ್ಡಮ್ಮನು ಕೊಟ್ಟ ಹಾರವನ್ನು ದೂರ ಎಸೆದಳು. ಹಾರ ಗೋಡೆಗೆ ತಗುಲಿ ಉಂಗುರ ಕಳಚಿ ಬಿತ್ತು.

ಆ ಉಂಗರವನ್ನು ಕಂಡಕೂಡಲೇ ಬಾಲ ನಾಗಮ್ಮ ಗುರುತು ಹಿಡಿದಳು. ತನ್ನ ಮಗ ನನ್ನು ನೋಡಿದಷ್ಟು ಸಂತೋಷ, ಮತ್ತು ದುಃಖವಾಯಿತು. ಅದನ್ನು ತಡೆಯಲಾರದೆ ಬೋರೆಂದು ಅತ್ತಳು. 'ಮಗೂ ನೀನು ಬಂದಿರುವೆಯಾ ಇಲ್ಲಿಗೆ? ನೀನು ಯೇಕೆ ಬಂದೆ ಮಗೂ? ನಿನ್ನನ್ನು ಈ ಮಾಯಾವಿ ಬದುಕ



ಗೊಡುವನೇ? ಈ ಪಾಪಿ ನಿನ್ನ ಪಿತರನ್ನೆಲ್ಲಾ ನುಂಗಿಬಿಟ್ಟನಲ್ಲಾ" ಎಂದು ತನ್ನಲ್ಲಿ ತಾನು ಅಂದುಕೊಂಡು, ಆ ಉಂಗುರವನ್ನು ತನ್ನ ಬೆರಳಿಗಿಟ್ಟುಕೊಂಡಳು.

ಬಾಲಕನು ದಿನಂಪ್ರತಿ ಒಳ್ಳೆಯ ಹಾರ ಗಳನ್ನು ಕಟ್ಟಿ ಫಕೀರನನ್ನು ಮೆಚ್ಚಿಸಿದ. ಒಂದುದಿನ ಫಕೀರ ದೊಡ್ಡಮ್ಮನೊಂದಿಗೆ "ಏನಮ್ಮಾ! ಒಂದು ದಿನ ನಿನ್ನ ಮೊಮ್ಮಗ ನನ್ನು ಕರೆದುಕೊಂಡು ಬಂದು ನನಗೆ ತೋರಿಸು" ಎಂದ.

ಮರುದಿನ ಹಾರಗಳನ್ನು ತರುವಾಗ ದೊಡ್ಡಮ್ಮ ಬಾಲಕನನ್ನು ಫಕೀರನ ಹತ್ತಿರ ಕರೆದುಕೊಂಡು ಹೋದಳು. ಫಕೀರನು ಹುಡುಗನನ್ನು ನೋಡಿ ಬಹಳ ಸಂತೋಷ ಪಟ್ಟು "ಲೋ ಹೈದ, ನೀನು ಹಾರ ಬಹು



ಸೊಗಸಾಗಿ ಕಟ್ಟೇ ಕಣೋ. ನಿನಗೆ ಆನೆ ಬೇಕೋ, ಕುದುರೆ ಬೇಕೊ, ಯಾವುದು ಬೇಕು ಹೇಳು" ಎಂದ.

"ಅಯ್ಯಾ, ನನಗೇಕೆ ಅವು? ನಿನ್ನ ಹತ್ತಿರ ಹನ್ನೆರಡು ಸ್ತಂಭದ ಮಸೀದಿ ಇದೆಯಂತೆ. ಅದು ಬಹಳ ಅದ್ಭುತವಾಗಿರುವುದಂತೆ. ಅದನ್ನು ನನಗೆ ತೋರಿಸಿದರೆ ಸಾಕು" ಎಂದ ಆ ಬಾಲಕ.

"ಅರೆ ಅಲ್ಲಾ! ಆ ಮಸೀದಿಯಲ್ಲಿ ಹಾನುಗಲ್ಲಿನ ಬಾಲನಾಗಮ್ಮ ಇದ್ದಾಳೆಕಣೋ! ಅವಳು ಅಲ್ಲಿ ವ್ರತಮಾಡುತ್ತಿದ್ದಾಳೆ. ಆ ವ್ರತ ಮುಗಿಯುವವರಿಗೂ ನಾನು ಮಸೀದಿಯಲ್ಲಿ ಕಾಲಿಡಕೂಡದು. ಮತ್ತೇನಾದರೂ ಕೇಳು ಕೊಡ್ತೇನೆ" ಎಂದ ಫಕೀರ.

"ಅಯ್ಯಾ ನೀವು ಬರದಿದ್ದರೆ ನಾನೇ ಹೋಗಿ ನೋಡಿಕೊಂಡು ಬರಕೂಡದೇ?" "ಅರೆ, ಬಾಗಿಲುಗಳೆಲ್ಲವೂ ಮಂತ್ರದಿಂದ ಮುಚ್ಚಿದೆಕಣೋ. ಹೇಗೆ ತೆಗೆಯುವೆ?.... ಅಚ್ಛಾ! ನಾನು ನಿನಗೆ ಆ ಮಂತ್ರಗಳನ್ನು ಹೇಳ್ತೇನೆ. ನೀನು ಹೋಗಿ ಮಸೀದಿ ನೋಡುವಿಯಂತೆ" ಎಂದು ಬಾಲಕನಿಗೆ ಬಾಗಿಲನ್ನು ತೆಗೆದು ಮುಚ್ಚುವ ಮಂತ್ರಗಳನ್ನು ಹೇಳಿದ.

ಬಾಲವರ್ಧಿರಾಜನು ಮಸೀದಿಯಲ್ಲಿ ಕಾಲಿಟ್ಟ ಕೂಡಲೇ ದೇವತೆಯಂತೆ ಕುಳಿತಿರುವ ತನ್ನ ತಾಯಿಯನ್ನು ಕಂಡ. ಮೆಲ್ಲನಡಿಯಿಡುತ್ತಾ ಆಕೆಯನ್ನು ಸಮೀಪಿಸಿದ.

ಬಾಲನಾಗಮ್ಮ ತಲೆ ಎತ್ತಿ ಆತನನ್ನು ನೋಡಲಿಲ್ಲ. ಬರುತ್ತಿರುವುದು ಮಾಯಾ ಫಕೀರನೆಂದು ಆಕೆಯ ನಂಬಿಕೆ. ಬಾಲಕನು ಇನ್ನೂ ಸ್ವಲ್ಪದೂರದಲ್ಲಿರುವಾಗಲೇ "ಎಲೇ ಫಕೀರ ಇನ್ನೊಂದು ಹೆಜ್ಜೆ ಇಟ್ಟಿಯೋ ನಿನ್ನ ತಲೆ ಸೀಳಿ ಸಾಯುವೆ" ಎಂದಳು.

ಅದಕ್ಕೆ ಬಾಲಕ "ಅಮ್ಮಾ, ನಾನು ಮಾಯಾಫಕೀರನಲ್ಲವಮ್ಮಾ. ನಿನ್ನ ಮಗ ಬಾಲವರ್ಧಿರಾಜ ಅಮ್ಮಾ, ನನ್ನ ಕಡೆ ನೋಡಮ್ಮಾ" ಎಂದ.

ಬಾಲನಾಗಮ್ಮ ಅನುಮಾನದಿಂದ ತಲೆ ಮೇಲಕ್ಕೆ ಎತ್ತಿ ನೋಡಿ "ಏನೋ, ಹೇಗೆ ನಂಬಲಿ. ಫಕೀರ ಎಷ್ಟು ವೇಷಗಳನ್ನಾದರೂ ಹಾಕಬಲ್ಲ" ಎಂದಳು.



"ನಾನು ನಿನ್ನ ಮಗನೇ ಅಮ್ಮಾ! ದುಷ್ಟ ಫಕೀರನ ಬಂಧನದಿಂದ ನಿನ್ನನ್ನು ರಕ್ಷಿಸಲು ಎಷ್ಟೋ ಶ್ರಮ ವಹಿಸಿ ಇಲ್ಲಿಗೆ ಬಂದೆ. ನನ್ನ ಉಂಗರವನ್ನು ದೊಡ್ಡಮ್ಮನೊಂದಿಗೆ ನಿನಗೆ ಕಳುಹಿಸಿದೆ. ಬೇಗ ಹಿಂದಿರುಗ ದಿದ್ದರೆ ಫಕೀರ ಅನುಮಾನಪಡಬಹುದು. ನಾನು ನಿನ್ನೊಂದಿಗೆ ಮಾತನಾಡಬೇಕೆಂದಿದ್ದೆ. ಅನುಮಾನದಿಂದ ಕಾಲವ್ಯಯಮಾಡಬೇಡ ವಮ್ಮಾ!" ಎಂದು ಹುಡುಗನು ನಮಸ್ಕಾರ ಮಾಡಿದನು

ಈ ಮಾತುಗಳಿಂದ ಬಾಲನಾಗಮ್ಮನ ಸಂದೇಹ ದೂರವಾಯಿತು. ಆಕೆ ಚಟಕ್ಕನೆ ಎದ್ದು ತನ್ನ ಮಗನನ್ನು ಕಟ್ಟಿಕೊಂಡು, ಹಸುಳೆಯನ್ನು ಮುದ್ದಾಡುವಂತೆ ಮುದ್ದಾಡಿ ದಳು. ಆಕೆಗೆ ಸಂತೋಷದುಃಖಗಳೆರಡೂ ಉಕ್ಕಿಬಂದವು.

"ಮಗೂ, ನೀನು ಇನ್ನೂ ಹುಡುಗ. ನಮ್ಮ ಹನ್ನೆರಡು ಸಾವಿರ ಸೈನ್ಯವನ್ನು ಕಲ್ಲಿನ ರಾಶಿ ಮಾಡಿದ ಈ ಫಕೀರನನ್ನು ನೀನು ಹೇಗೆ ಜಯಿಸುವೆ? ಪ್ರಾಣ ಉಳಿಸಿಕೊಂಡು ಮನೆಗೆ ಹೋಗು. ನಾನು ನಿನಗೆಲ್ಲಿಯ ತಾಯಿ. ನಿನ್ನನ್ನು ಬೆಳಸಿ ದೊಡ್ಡವನನ್ನಾಗಿ ಮಾಡಿದ ಆ ಆರುಜನ ಅಕ್ಕತಂಗಿಯರೇ ನಿನ್ನ ತಾಯಂದಿರು. ಹೋಗು, ಮಗು ಹೋಗು. ನನ್ನ ಕಣ್ಣಿಗೆ ಕಾಣಿಸಿಕೊಂಡೆ. ಅಷ್ಟೇ ಸಾಕು" ಎಂದು ಅಳತೊಡಗಿದಳು.

ಬಾಲಕನು ಆಕೆಯನ್ನು ಸಮಾಧಾನ ಪಡಿಸಿ, ಆಕೆಗೆ ರಹಸ್ಯವಾಗಿ ಒಂದು ಯುಕ್ತಿ ಹೇಳಿ, ತಾಯಿಯ ಹತ್ತಿರ ಅಪ್ಪಣೆ ಪಡೆದು ಮಸೀದಿಯ ಬಾಗಿಲನ್ನು ಮತ್ತೆ ಮುಚ್ಚಿ, ಏನೂ ಅರಿಯದವನಂತೆ ಫಕೀರನ ಹತ್ತಿರ ಬಂದನು.

"ಲೋ ಹೈದ, ಹೇಗಿತ್ತು ಮಸೀದಿ" ಎಂದ ಫಕೀರ.

"ಅಯ್ಯಾ ಆ ಮಸೀದಿಯ ಸೊಬಗನ್ನು ನೋಡಿದರೆ ಹಸಿವು ಬಾಯಾರಿಕೆ ತಿಳಿಯುವು ದಿಲ್ಲ. ಬಿಟ್ಟು ಬರಲಾರದೆ ಬಂದೆ" ಎಂದ ಬಾಲಕ.

ಫಕೀರ ನಗುತ್ತಾ "ಹುಚ್ಚು ಹುಡುಗ, ಮಸೀದಿ ನೋಡಿದರೆ ಹೊಟ್ಟೆ ತುಂಬುವು

ದೇನೊ? ಸೊಗಸಾಗಿ ಊಟಮಾಡಬೇಕು. ಹೊಟ್ಟೆ ತುಂಬಬೇಕು. ರಾಜ್ಯ ಆಳಬೇಕು. ಸುಖಪಡಬೇಕು" ಎಂದ.

ಬಾಲಕನು ದೊಡ್ಡಮ್ಮನೊಡನೆ ಫಕೀರನ ಅಪ್ಪಣೆ ಪಡೆದು ಮನೆಗೆ ಬಂದ.

ಮರುದಿನ ಬಾಲನಾಗಮ್ಮ ಹೊತ್ತಿಗೆ ಮುಂಚೆ ಎದ್ದಳು. ಎಣ್ಣೆ ಸ್ನಾನ ಮಾಡಿದಳು. ಎಲ್ಲ ಆಭರಣಗಳನ್ನೂ ತೊಟ್ಟುಕೊಂಡು ಅಲಂಕರಿಸಿಕೊಂಡಳು. ತಾಂಬೂಲ ಹಾಕಿಕೊಂಡಳು. ಫಕೀರನಿಗಾಗಿ ರುಚಿರುಚಿಯಾದ ಅಡಿಗೆ ಮಾಡಿಸಿದಳು. ಫಕೀರ ತೋಟದಿಂದ ಹಿಂತಿರುಗುವ ಸಮಯಕ್ಕಾಗಿ ಕಾದುಕೊಂಡಿದ್ದಳು.

ಫಕೀರ ಪುಷ್ಕಳವಾಗಿ ಊಟಮಾಡಿ, ಹೆಂಡ ಸಾರಾಯಿ ಕುಡಿದು, ಅಫೀಮು ತಿಂದು, ಗುಡುಗುಡಿಯಲ್ಲಿ ಗಾಂಜಾ ಸೇದುತ್ತಾ ಒಳ್ಳೇ ನಿಶಾದಲ್ಲಿರುವಾಗ ಸಂಕರ ದೊಡ್ಡಮ್ಮ ಭಾರಿ ಹಾರಗಳನ್ನು ಫಕೀರನ ಹತ್ತಿರವಿಟ್ಟು ಹೋದಳು. ಇಷ್ಟರಲ್ಲಿ ಬಾಲನಾಗಮ್ಮ ಹಾವಿನ ಪೊರೆಯಂತಹ ನವುರಾದ ಸೀರೆಯನ್ನುಟ್ಟು ಆಭರಣಗಳೊಂದಿಗೆ ರಾರಾಜಿಸುತ್ತಾ, ತಾಂಬೂಲವನ್ನು ಮೆಲ್ಲುತ್ತಾ, ನಸುನಗುತ್ತಾ ಮಂದಗಮನದಿಂದ ಫಕೀರನ ಹತ್ತಿರ ಬಂದು ನಿಂತಳು.

[ಮುಂದುವರಿಯುವುದು]






ಪೂರ್ವಕಾಲದಲ್ಲಿ ಒಬ್ಬ ಗೊಲ್ಲರ ಹುಡುಗ ನಿದ್ದನು. ಅವನು ಬೆಳಗಿನ ಹೊತ್ತು ದನಗಳನ್ನು ಮೇಯಿಸಿ, ಮಧ್ಯಾಹ್ನ ವಿಶ್ರಾಂತಿಗಾಗಿ ಅವುಗಳನ್ನು ಒಂದು ಅರಳಿಮರದ ನೆರಳಿಗೆ ಅಟ್ಟುತ್ತಿದ್ದನು.

ಹೀಗೆ ಕೆಲಕಾಲವಾದಮೇಲೆ ಒಂದು ತಮಾಷೆ ನಡೆಯಿತು. ಒಂದುದಿನ ಅರಳಿ ಮರದ ಕೆಳಗೆ ಕುಳಿತುಕೊಂಡು ಆಯಾಸ ಪರಿಹಾರಮಾಡಿಕೊಳ್ಳುತ್ತಿರುವಲ್ಲಿ ' ಮಗೂ ನನ್ನ ಬುಡದಲ್ಲಿ ನೀನು ಪ್ರತಿದಿನವೂ ಹಾಲು ಹಾಕಿದರೆ ನಿನಗೆ ಶ್ರೇಯಸ್ಸು ಉಂಟಾಗುತ್ತದೆ" ಎಂದು ಅರಳಿ ಮರ ಹೇಳಿದ ಹಾಗೆ ಕೇಳಿ ಬಂತು. ಅಂದಿನಿಂದ ಅವನು ತನ್ನ ಮಂದೆಯ ಹಸುಗಳ ಹಾಲನ್ನು ಕರೆದು ಆ ಮರದ ಬುಡದಲ್ಲಿ ಎರೆಯುತ್ತಿದ್ದನು.

ಅವನು ಪ್ರತಿದಿನವೂ ಗಿಡದ ಬುಡದಲ್ಲಿ ಹಾಲೆರೆಯುತ್ತಿದ್ದನು. ಕೆಲದಿನಗಳಾದ ಮೇಲೆ ಒಂದುದಿನ ಫಟಾರೆಂದು ಭೂಮಿ ಸೀಳಿ ಅದರಿಂದ ಒಂದು ದೊಡ್ಡ ನಾಗರ ಹಾವು ಹೆಡೆಯನ್ನು ಎತ್ತಿಕೊಂಡು ಸರಸರನೆ ಹರಿದುಕೊಂಡು ಮೇಲಕ್ಕೆ ಬಂತು. ಅದನ್ನು ನೋಡಿ ಗೊಲ್ಲರ ಹುಡುಗ ಬೆದರಿದನು.

' ಮಗೂ, ನೀನೇನು ಭಯಪಡಬೇಡ. ಕೆಲವುಜನ ದುಷ್ಟರು ನನ್ನನ್ನು ನಿಷ್ಕಾರಣವಾಗಿ ಈ ಮರದಡಿಯಲ್ಲಿ ಹಳ್ಳ ತೋಡಿ ಹೂಳಿಬಿಟ್ಟರು. ಆದ್ದರಿಂದ ಸಾಯಲು ಸಿದ್ಧನಾದೆ. ಇಷ್ಟರಲ್ಲಿ ನೀನು ಧರ್ಮದಿಂದ ಹಾಲು ಹಾಕುತ್ತಿದ್ದುದರಿಂದ ನಾನು ಚೇತರಿಸಿಕೊಂಡೆ. ಎಷ್ಟು ಜನ್ಮಗಳನ್ನೆತ್ತಿದರೆ ಮಾತ್ರ ನಿನ್ನಂತಹ ಪ್ರಾಣದಾತನ ಋಣ ತೀರಿಸಬಲ್ಲೆನು? ಅಳಿಲು ಭಕ್ತಿ ಎಂದ ಹಾಗೆ ಒಂದು ಸಣ್ಣ ವರವನ್ನು ನಿನಗೆ ಕೊಡುವೆನು." ಎಂದು ನಾಗರಹಾವು ಅವನನ್ನು ಹತ್ತಿರಕ್ಕೆ ಬಾ ಎಂದಿತು.

ಅವನು ಹತ್ತಿರಕ್ಕೆ ಬಂದಕೂಡಲೇ ತಲೆಯಮೇಲೆ ಊದಿ " ಯುವಕನೇ, ನನ್ನ

ಶಶಿಕಲಾ, ಚಿತ್ರದುರ್ಗ



ಮಹಿಮೆಯಿಂದ ನಿನ್ನ ತಲೆ ಕೂದಲು ಚಿನ್ನದ ಕೂದಲಾಗಿ ಬದಲಾಯಿಸುವುದು. ಇದರಿಂದ ನಿನಗೆ ಅಂದವಾದ ಹೆಂಡತಿ ಸಿಗುವಳು. ಅಷ್ಟೇ ಅಲ್ಲದೆ ನೀನು ಯಾವ ಮಾತು ಹೇಳಿದರೂ ಆಪ್ರಕಾರ ನಡೆಯುವುದು. ನೀನು ಅದೃಷ್ಟವಂತ ಹೋಗು." ಎಂದು ಆಶೀರ್ವಾದಮಾಡಿತು. ಆ ತರುವಾಯ ಈ ರೀತಿ ಎಚ್ಚರಿಸಿತು. "ಈ ವರ ಲಭಿಸಿದ ವಿಷಯವನ್ನು ಬ್ರಹ್ಮರುದ್ರರಿಗೇ ಅಲ್ಲ,—ನಿನ್ನ ಪ್ರೀತಿಪಾತ್ರಳಾದ ಪತ್ನಿಗೂ ತಿಳಿಸಬಾರದು. ಹಾಗೇನಾದರೂ ತಿಳಿಯಿತೋ, ಕೂಡಲೇ ಈ ಮಹಿಮೆಯು ಮಾಯವಾಗುವುದು ಕಂಡೆಯಾ?" ಎಂದು ಹೇಳಿ ಹೋಯಿತು.

ಗೊಲ್ಲರ ಹುಡುಗ ಸಂತೋಷದಿಂದ ಮನೆ ಸೇರಿದ.

ಒಂದುದಿನ ಗೊಲ್ಲರ ಹುಡುಗನು ನದಿಯಲ್ಲಿ ಸ್ನಾನಮಾಡಿ ತಲೆ ಒರಸಿಕೊಳ್ಳುತ್ತಿರುವಾಗ ಥಳಥಳಿಸುವ ಹನ್ನೆರಡು ಮೊಳ ದುದ್ದದ ಒಂದು ಬಂಗಾರದ ತಲೆ ಗೂದಲು ಕಿತ್ತು ಬಂತು. ಉತ್ಸಾಹಭರಿತನಾಗಿ ಆತನು ಆ ಕೂದಲನ್ನು ಒಂದು ಎಲೆಯಲ್ಲಿ ಜಾಗರೂಕತೆಯಿಂದ ಪೊಟ್ಟಣ ಕಟ್ಟಿ ನದಿಯಲ್ಲಿ ಬಿಟ್ಟನು.

ಕೆಳಗಿನ ಘಟ್ಟದಲ್ಲಿ ಸ್ನಾನಮಾಡುತ್ತಿದ್ದ ಒಬ್ಬ ರಾಜಕುಮಾರಿಗೆ ಗೊಲ್ಲರ ಹುಡುಗನು ಬಿಟ್ಟಿದ್ದ ಎಲೆಯ ಪೊಟ್ಟಣ ಸಿಕ್ಕಿತು. ಆತುರದಿಂದ ಆಕೆ ಪೊಟ್ಟಣ ಬಿಚ್ಚಿದಳು. ಅದರಲ್ಲಿ ಹನ್ನೆರಡು ಮೊಳದುದ್ದ ಇರುವ ಬಂಗಾರದ ಕೂದಲು ತಳತಳನೆಂದು ಹೊಳೆಯುತಿತ್ತು. ಅವಳಿಗೆ ಅಶ್ಚರ್ಯವಾಯಿತು.

ಕೂಡಲೇ ಆಕೆಯು ತನ್ನ ತಂದೆಯ ಹತ್ತಿರಕ್ಕೆ ಹೋಗಿ "ಅಪ್ಪಾ ನಾನು ಇಂತಹ ಚಿನ್ನದ ತಲೆ ಗೂದಲು ಇರುವಾತನನ್ನು ಮದುವೆ ಯಾಗುವೆನು. ಇಲ್ಲದಿದ್ದಪಕ್ಷದಲ್ಲಿ ಮದುವೆ ಆಗುವುದೇ ಇಲ್ಲ" ಎಂದು ತನ್ನ ನಿರ್ಧಾರವನ್ನು ತಿಳಿಸಿದಳು.

ಈ ವಿಚಿತ್ರವನ್ನು ಕೇಳಿ ರಾಜ ಮತ್ತು ರಾಣಿಯರು ಆಶ್ಚರ್ಯಪಟ್ಟರು. ಚಿನ್ನದ ತಲೆ



ಗೂಡಲಿರುವ ಹುಡುಗನನ್ನು ಹುಡುಕಿ ತರಲು ಅವರು ಕೋಟೆಯಲ್ಲಿದ್ದ ಪರಿವಾರ ವನ್ನೆಲ್ಲಾ ಕಳುಹಿಸಿದರು. ಅಂತಹ ಹುಡು ಗನು ಕಾಣಬರಲಿಲ್ಲವೆಂದು ಅವರು ತಿರುಗಿ ಬಂದರು. ಗೂಢಚಾರರನ್ನು ನಾಲ್ಕು ದಿಕ್ಕಿಗೂ ಅಟ್ಟಿದರು. ಅವರೂ ಪೆಚ್ಚುಮುಖ ಹಾಕಿ ಕೊಂಡು ಬಂದರು. ಇದೆಲ್ಲಾ ಸರಿಯಲ್ಲ ವೆಂದು ಕೆಲಸಾಧುಗಳನ್ನು ದೇಶವಿದೇಶ ಗಳಿಗೆ ಕಳುಹಿಸಿದರು. ಅವರೂ ಅಲೆದು ಅಲೆದು ಬಂದು ಲಾಭವಿಲ್ಲವೆಂದರು.

ಕೊನೆಗೆ ಒಂದು ಗಿಣಿ "ಮಹಾರಾಜ, ಚಿನ್ನದ ತಲೆ ಗೂಡಲಿರುವ ಹುಡುಗನನ್ನು ನಾವು ಕಂಡು ಹಿಡಿಯಲು ಸಾಧ್ಯವೇ ಹೊರತು ಮಾನವರಿಗೆ ಶಕ್ಯವಿಲ್ಲ. ನನ್ನನ್ನು ಪಂಜರದಿಂದ ಬಿಡಿ. ನಿಮಿಷದಲ್ಲಿ ಆ ಹುಡುಗನನ್ನು ಕರೆತರುವೆನು. ನನ್ನ ಪ್ರತಿಭೆ ನೋಡಿ" ಎಂದಿತು.

ಕೂಡಲೇ ಗಿಣಿಯನ್ನು ಪಂಜರದಿಂದ ಪಾರುಮಾಡಿ, ಅದಕ್ಕೆ ಸೊಗಸಾದ ಊಟ ವಿಟ್ಟು ಪ್ರಯಾಣ ಏರ್ಪಡಿಸಿದರು. ಅದು ನದಿ ಪರ್ವತಗಳನ್ನು ದಾಟಿ ಅಡವಿಯ ಮಧ್ಯೆ ದಲ್ಲಿದ್ದ ಗೊಲ್ಲರ ಹುಡುಗನನ್ನು ಕಂಡು ಹಿಡಿಯಿತು. ಆಗ ಅದೇನು ಮಾಡಿತು ಬಲ್ಲಿರಾ? ಒಂದೊಂದು ದನದಮೇಲಿಂದ ಮೆಲ್ಲಮೆಲ್ಲಗೆ ಹಾರುತ್ತಾ ಹೋಗಿ ಅನ್ಯ ಮನಸ್ಕನಾಗಿದ್ದ ಗೊಲ್ಲರ ಹುಡುಗನ ಕೈಯ ಲ್ಲಿದ್ದ ಪಿಳ್ಳಂಗೋವಿಯನ್ನು ಬಾಯಲ್ಲಿ ಕಚ್ಚಿ ಕೊಂಡು ಗಿಡದಮೇಲಕ್ಕೆ ಹಾರಿತು.

ಗೊಲ್ಲರ ಹುಡುಗ ಪಿಳ್ಳಂಗೋವಿಗಾಗಿ ಗಿಣಿಯನ್ನು ಹಿಂಬಾಲಿಸಿದ. ಅದು ಮರ ದಿಂದ ಮರಕ್ಕೆ ಹಾರುತ್ತಾ ರಾಜ ಕುಮಾರಿಯ ಅಂತಃಪುರದಕಡೆ ಹಾರಿ ಹೋ ಯಿತು. ಆತುರದಲ್ಲಿದ್ದ ಗೊಲ್ಲ ಹುಡುಗನು ತನ್ನ ದನಗಳ ವಿಷಯ ಮರೆತು ಗಿಣಿಯನ್ನು ಹಿಂಬಾಲಿಸಿ ಅಂತಃಪುರವನ್ನು ಪ್ರವೇಶಿ ಸಿದನು.

ತನ್ನ ಕೆಲಸ ನೆರವೇರಿತೆಂಬ ಸಂತೋಷ ದಿಂದ ಬಾಯಲ್ಲಿ ಕಚ್ಚಿಕೊಂಡಿದ್ದ ಕೊಳಲನ್ನು ರಾಜಕುಮಾರಿಯ ಮಡಿಲಲ್ಲಿ ಹಾಕಿ, ಗಿಣಿ

ಹಾರಿ ಹೋಯಿತು. ಗೊಲ್ಲರ ಹುಡುಗನು ತನ್ನ ಪಿಳ್ಳಂಗೋವಿಯನ್ನು ತನಗೆ ಕೊಡು ವಂತೆ ರಾಜಕುಮಾರಿಯನ್ನು ಕೇಳಿದ. ಅದಕ್ಕೆ ಆಕೆ ನಸುನಗುತ್ತಾ "ನನ್ನನ್ನು ಮದುವೆಯಾದರೆ ಕೊಡುವೆನು, ಇಲ್ಲದಿದ್ದರೆ ಇಲ್ಲ" ಎಂದಳು. ಆ ಹುಡುಗನಿಗೆ ಆಶ್ಚರ್ಯ ವಾಯಿತು. "ಸ್ವಯಂವರವಿಲ್ಲದೆ ನಿಶ್ಚಿತಾರ್ಥ ವಿಲ್ಲದೆ ಹಠಾತ್ತಾಗಿ ಮದುವೆ ಎಂದರೇನು?" ಎಂದ. "ಸ್ವಯಂವರ, ನಿಶ್ಚಿತಾರ್ಥಗಳೆಲ್ಲವೂ ನನಗೆ ನದಿಯಲ್ಲಿ ಪೊಟ್ಟಣ ಸಿಕ್ಕಿದ ದಿನವೇ ತೀರ್ಮಾನವಾಯಿತು" ಎಂದು ತನಗೆಸಿಕ್ಕಿದ ಎಲೆಯ ಪೊಟ್ಟಣವನ್ನು ತೋರಿಸಿದಳು.

ಇದೆಲ್ಲವೂ ತನಗೆ ವರವಿತ್ತ ನಾಗರ ಹಾವಿನ ಮಹಿಮೆಯೆಂದು ಆ ಗೊಲ್ಲರ ಹುಡುಗನು ಅರಿತನು. ಆಕೆಯನ್ನು ಮದುವೆ ಯಾಗಲು ಸಮ್ಮತಿಸಿದನು. ಕೆಲದಿನಗಳಲ್ಲಿ ಅವರಿಬ್ಬರಿಗೂ ವಿಜೃಂಭಣೆಯಿಂದ ವಿವಾಹ ವಾಯಿತು. ಆ ರಾಜನು ತನ್ನ ಕುವರಿ ಯನ್ನೂ ಮಾತ್ರವೇ ಅಲ್ಲದೆ ತನ್ನ ರಾಜ್ಯದಲ್ಲಿ ಅರ್ಧವನ್ನು ಆತನಿಗೆ ಕೊಟ್ಟನು.

ಗೊಲ್ಲರ ಹುಡುಗ ಸುಖವಾಗಿ ಕಾಲ ಕಳೆಯತೊಡಗಿದ. ಕೆಲದಿನಗಳಾದಮೇಲೆ ಒಂದುದಿನ ಆತನಿಗೆ ತಾನು ಅಡವಿಯಲ್ಲಿ ಬಿಟ್ಟು ಬಂದ ದನಗಳು ಜ್ಞಾಪಕಕ್ಕೆ ಬಂತು. ಕೂಡಲೇ ಅಲ್ಲಿಗೆ ಹೋಗಲು ನಿರ್ಧರಿಸಿದನು. ತಾನೂ ಬರುವೆನೆಂದಳು ಆತನ ಹೆಂಡತಿ.

ಇಬ್ಬರೂ ಅಡವಿಗೆ ಹೋಗಿ ನೋಡಿದರೆ ಎಲ್ಲ ಪಶುಗಳೂ ಸತ್ತುಹೋಗಿದ್ದವು. ಆತನಿಗೆ ನಾಗರ ಹಾವು ತನಗಿತ್ತ ಎರಡನೇ ವರ ಜ್ಞಾಪಕಕ್ಕೆ ಬಂತು. ಆಗ ಆತನು "ನನ್ನ ಪಶುಗಳು ಬದುಕಬೇಕು" ಎಂದು ಮನದಲ್ಲೇ ಕೋರಿದನು.

ಕೂಡಲೇ ದನಗಳೆಲ್ಲವೂ ಬಾಲವನ್ನು ಆಡಿಸುತ್ತಾ ಎದ್ದು ನಿಂತವು. ಅಪರಿಮಿತ ವಾದ ಆನಂದದಿಂದ ಅವರು ದನಗ ಳನ್ನು ತಮ್ಮರಾಜ್ಯಕ್ಕೆ ಓಡಿಸಿಕೊಂಡು ಹೋದರು.

ಮಾತಿನಲ್ಲಿ ಗುರಿಯಿರುವವರಿಗೂ, ಒಳ್ಳೆಯ ನಡತೆಯುಳ್ಳವರಿಗೂ ಎಂದಿ ಗಾದರೂ ಒಳ್ಳೆಯದಾಗುವುದು.






# ಅನ್ನದಾನ ಮಹಿಮೆ

ಪೂರ್ವಕಾಲದಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಎಂಥಾ ಹೊತ್ತಿನಲ್ಲಾಗಲೀ ತನ್ನ ಮನೆಗೆ ಯಾರಾದರೂ ಬಂದರೆ ಅವರ ಪರಿಚಯ ತನಗಿಲ್ಲದಿದ್ದರೂ ಆದರದಿಂದ ಬರಮಾಡಿ ಕೊಂಡು ಊಟವಿಡುತ್ತಿದ್ದನು. ಒಂದುವೇಳೆ ಮನೆಗೆ ಯಾರೂ ಬರದಿದ್ದಲ್ಲಿ ಬೀದಿಗೆ ಹೋಗಿ ತಾನೇ ಅತಿಥಿಗಳನ್ನು ಕರೆದು ಅನ್ನ ವಿಡುತ್ತಿದ್ದನು. ಹೀಗೆ ಬಹಳ ವರ್ಷಗಳು ಕಳೆದವು. ಒಂದುದಿನ ಆತನಿಗೆ ಅನ್ನದಾನ ದಿಂದ ಬರುವ ಪುಣ್ಯವೇನೆಂದು ಅರಿಯಲು ಕುತೂಹಲವಾಯಿತು. ಯಾರೂ ಸರಿಯಾದ ಉತ್ತರ ಹೇಳದಾದರು.

ಒಬ್ಬಾತ ಅಂದನು: "ಅನ್ನದಾನದ ಮಹಿಮೆ ಬಹಳ ಶ್ರೇಷ್ಠವಾದದ್ದು. ಅದನ್ನು ವರ್ಣಿಸಬೇಕೆಂದರೆ ಕಾಶೀ ಅನ್ನಪೂರ್ಣೆಗೆ ಹೊರತು ಯಾರಿಂದಲೂ ಸಾಧ್ಯವಿಲ್ಲ. ನಿಮಗೆ ತಿಳಿದುಕೊಳ್ಳಬೇಕೆಂಬ ಅಭಿಲಾಷೆ ಯಿದ್ದಲ್ಲಿ ಸ್ವತಃ ಅನ್ನಪೂರ್ಣಾದೇವಿಯನ್ನು ಕೇಳಿ ತಿಳಿದುಕೊಳ್ಳಿ" ಎಂದು ಸಲಹೆ ಕೊಟ್ಟ.

ಅನ್ನಪೂರ್ಣ ಎಂದರೆ ಕಾಶಿ ವಿಶ್ವೇಶ್ವರನ ಪತ್ನಿಯಾದ ಪಾರ್ವತಿದೇವಿ. ಆಕೆಗೂ ಸಹ ಅನ್ನದಾನವೆಂದರೆ ಎಷ್ಟೋ ಆಸಕ್ತಿ. ಆದುದ ರಿಂದಲೇ ಕಾಶಿಯಲ್ಲಿ ಯಾರಿಗೂ ಅನ್ನಕ್ಕೆ ಕೊರತೆಯಿಲ್ಲ. ನಮ್ಮ ಬ್ರಾಹ್ಮಣ ಕಾಶಿಗೆ ಹೋಗಿ ಗಂಗಾನದಿಯ ತೀರದಲ್ಲಿ ಕುಳಿತು ಪಾರ್ವತಿದೇವಿಯನ್ನು ಕುರಿತು ಗಾಢವಾಗಿ ತಪಸ್ಸು ಮಾಡಲಾರಂಭಿಸಿದನು.

ದೇವಿ ಆತನ ತಪಸ್ಸಿಗೆ ಮೆಚ್ಚಿಕೊಂಡು ಪ್ರತ್ಯಕ್ಷಳಾದಳು.

ಬ್ರಾಹ್ಮಣನು ಸಾಷ್ಟಾಂಗವೆರಗಿ "ಅನ್ನ ಪೂರ್ಣಾದೇವಿ! ಅನ್ನದಾನದ ಮಹಿಮೆ ಯನ್ನು ತಿಳಿಯಲು ನಾನು ನಿಮ್ಮನ್ನು ಕುರಿತು ತಪಸ್ಸು ಮಾಡಿದೆ. ಈ ವಿಷಯವನ್ನು ನೀವಲ್ಲದೆ ಮತ್ಯಾರಿಗೂ ಹೇಳಲಸಾಧ್ಯ" ಎಂದು ತನ್ನ ಉದ್ದೇಶವನ್ನು ಹೇಳಿದನು.

ಆಗ ದೇವಿ ಆತನೊಂದಿಗೆ "ನಿನಗೆ ಅನ್ನ ದಾನದ ಮಹಿಮೆ ನಾನು ಹೇಳುವುದಿಲ್ಲ; ಅದನ್ನು ತಿಳಿಯುವ ಉಪಾಯವನ್ನು ಮಾತ್ರ ಹೇಳುವೆನು ಕೇಳು. ಹಿಮಾಲಯ ಪರ್ವತದ

ಲಕ್ಷ್ಮಿ, ಸರಸ್ವತಿ, ಮೈಸೂರು.



ಹತ್ತಿರ ಹೇಮವತಿ ಎಂಬುದೊಂದು ಪಟ್ಟಣ ವಿದೆ. ಆ ಪಟ್ಟಣವನ್ನು ಆಳುತ್ತಿರುವ ರಾಜನಿಗೆ ಮಕ್ಕಳಿಲ್ಲ. ನೀನು ಆತನ ಹತ್ತಿರ ಹೋಗಿ ಆತನಿಗೆ ಮಗನು ಹುಟ್ಟಲಿ ಎಂದು ಆಶೀರ್ವಾದಮಾಡು. ಆ ರಾಜನು ಸಂತೋಷದಿಂದ ನಿನಗೇನು ಬೇಕು' ಎಂದು ಕೇಳುವನು. ಆಗ ನೀನು 'ನನಗೇನು ಅಂತಹ ದೊಡ್ಡ ಕೋರಿಕೆಯಿಲ್ಲ. ನಿನಗೆ ಮಗನು ಹುಟ್ಟಿದಕೂಡಲೇ ಆ ಹುಡುಗನನ್ನು ನಾನು ನೋಡಬೇಕು. ಆ ಸಮಯದಲ್ಲಿ ಮಗುವಿನ ಹತ್ತಿರ ಯಾರೂ — ರಾಣಿಯೂ ಸಹ — ಇರಲಾಗದು' ಎಂದು ಹೇಳು. 'ಇಷ್ಟೇ ತಾನೇ' ಎಂದು ರಾಜನು ಒಪ್ಪಿಕೊಳ್ಳುವನು. ಆ ಹುಡುಗನು ಹುಟ್ಟಿದ ಕೂಡಲೇ ಏಕಾಂತವಾಗಿ ಆತನನ್ನು 'ಅನ್ನದಾನದಿಂದ ಉಂಟಾಗುವ ಪುಣ್ಯವೇನು, ಮಗೂ' ಎಂದು ಕೇಳಿ ತಿಳಿದುಕೋ" ಎಂದು ಹೇಳಿದಳು.

ಬ್ರಾಹ್ಮಣನು 'ಸರಿ' ಎಂದು ಹೇಳಿ ಹೇಮಾವತಿಗೆ ಪ್ರಯಾಣ ಬೆಳಿಸಿದನು. ದಾರಿಯಲ್ಲಿ ಒಂದು ಅಡವಿ ಅಡ್ಡವಾಯಿತು. ಅದರಲ್ಲಿ ಹೋಗುತ್ತಿರುವಾಗ ದಾರಿ ತಪ್ಪಿದನು. ದಾರಿ ತಿಳಿಯದೆ ಒದ್ದಾಡುತ್ತಿರುವಲ್ಲಿ ಆ ಅಡವಿಯಲ್ಲಿದ್ದ ಬೇಡರವನೊಬ್ಬನು ಆತನ ಅವಸ್ಥೆಯನ್ನು ಅರಿತು "ಏನು ಸ್ವಾಮಿ ದಾರಿ ತಪ್ಪಿದಂತೆ ತೋರುವುದಲ್ಲಾ; ಎಲ್ಲಿಗೆ ಹೋಗಬೇಕು" ಎಂದು ಕೇಳಿದನು.

"ಹೇಮಾವತಿ ಪಟ್ಟಣಕ್ಕೆ ಹೋಗಬೇಕು" ಎಂದ ಬ್ರಾಹ್ಮಣ.

"ಸ್ವಾಮಿ ದಾರಿ ತಪ್ಪಿ ಒಂದು ಗಾವುದ ದೂರ ಬಂದಿರುವಿರಿ. ಸಾಯಂಕಾಲವಾಯಿತು. ಹುಲಿ ಸಿಂಹಗಳಿರುವ ಅಡವಿ ಇದು. ರಾತ್ರಿ ಪ್ರಯಾಣ ಮಾಡುವುದು ಅಪಾಯ. ಬೆಳಗಾದ ಕೂಡಲೇ ನಾನು ದಾರಿ ತೋರಿಸುವೆನು. ಈ ರಾತ್ರಿ ಇಲ್ಲೇ ತಂಗಿ ಬಿಡಿ" ಎಂದ ಬೇಡರವನು.

ಬ್ರಾಹ್ಮಣನು ರಾತ್ರಿ ಅಲ್ಲೇ ನಿಲ್ಲಲು ಒಪ್ಪಿಕೊಂಡನು. ಬೇಡರವನು ಆತನನ್ನು ತನ್ನ ಹೊಲದ ಹತ್ತಿರಕ್ಕೆ ಕರೆದುಕೊಂಡು ಹೋದನು. ಹೊಲವನ್ನು ಸೇರಿದ ಕೂಡಲೇ



ಬೇಡರವನು ತನ್ನ ಮನೆಗೆ ಅತಿಥಿಯಾಗಿ ಬಂದ ಬ್ರಾಹ್ಮಣನ ಊಟಕ್ಕೇನು ಮಾಡ ಬೇಕೋ ಯೋಚಿಸತೊಡಗಿದನು. ಅವರೇ ಕಾಯಿ, ಮತ್ತು ಕಾಳುಗಳು ಬೇಕಾದಷ್ಟು ಇದ್ದರೂ ಅವನ್ನು ಬೇಯಿಸಲು ಅವನ ಹತ್ತಿರ ಹೊಸ ಮಡಕೆ ಇರಲಿಲ್ಲ. ತನ್ನ ಮಡಕೆ ಯಲ್ಲೇ ಬೇಯಿಸಿಟ್ಟರೆ ಆತನು ತಿನ್ನುವುದಿಲ್ಲ. ಹೇಗೆ ಮತ್ತೆ ?.... ಬಗೆ ಹರಿಯಲಿಲ್ಲ.

ಬ್ರಾಹ್ಮಣನು "ಅಯ್ಯಾ, ನನಗೇನೂ ಬೇಡ. ನಿನ್ನ ಆದರದಿಂದ ನನ್ನ ಬಳಲಿಕೆ, ಹಸಿವು ಇಂಗಿದವು. ಏನೂ ಆಲೋಚಿಸ ಬೇಡ. ಮಲಗಿಕೋ" ಎಂದನು. ಆದರೆ ಬೇಡರವನ ಮನಸ್ಸಿಗೆ ಆ ಬ್ರಾಹ್ಮಣನನ್ನು ಉಪವಾಸವಿಡುವುದು ಒಪ್ಪಲಿಲ್ಲ. ಒಂದಿಷ್ಟು ಕಡಲೆ, ಜೇನು ತುಪ್ಪ ಆತನ ಮುಂದೆ ತಂ ದಿಟ್ಟು, ಅದರಿಂದ ಹಸಿವನ್ನು ಶಮನಮಾಡಿ ಕೊಳ್ಳುವಂತೆ ಕೇಳಿಕೊಂಡನು.

ಬ್ರಾಹ್ಮಣನು ಅವನ್ನು ಉಂಡು ತನ್ನ ಉತ್ತರೀಯವನ್ನು ಹಾಸಿ ನೆಲದಮೇಲೆ ಮಲಗಿಕೊಳ್ಳುತ್ತಿರುವಲ್ಲಿ "ಅಯ್ಯಾ, ಕೆಳಗೆ ಮಲಗಿಕೊಳ್ಳಬೇಡಿ. ಹುಲಿಗಳ ಕಾಟ" ಎಂದು ಹೇಳಿ ಆತನನ್ನು ಹೊಲದಲ್ಲಿ ಎತ್ತರ ವಾಗಿದ್ದ ಮಂಚದಮೇಲೆ ಮಲಗಿಸಿ ತಾನು ಕೆಳಗೆ ಬಿಲ್ಲು ಬಾಣಗಳೊಂದಿಗೆ ಯಾವ ಮೃಗವೂ ಬರದ ಹಾಗೆ ರಾತ್ರಿಯೆಲ್ಲಾ ಕಾವಲು ಕಾಯುತ್ತಿದ್ದನು.

ಬೇಡರವನು ನಿದ್ದೆಮಾಡದೆ ರಾತ್ರಿಯೆಲ್ಲಾ ಕಾವಲು ಕಾದನು. ಆದರೆ ಬೆಳಗಿನ ಜಾವ ಆತನಿಗೆ ಸ್ವಲ್ಪ ಜಂಪು ಹತ್ತಿತು. ಅಷ್ಟರಲ್ಲಿ ಎಲ್ಲಿಂದಲೋ ಒಂದು ಹುಲಿ ಬಂದು, ಆ ಬೇಡರವನ ಮೇಲೆ ಬಿದ್ದು ಸಾಯಿಸಿತು. ಪಾಪ! ಬ್ರಾಹ್ಮಣನು ನಿದ್ದೆಯಿಂದೆಚ್ಚೆತ್ತು ನಡೆದ ವಿಷಯವನ್ನು ಅರಿತು ತನ್ನಮೂಲಕ ಬೇಡರವನು ಹುಲಿಯ ಬಾಯಿಗೆ ತುತ್ತಾದ ನೆಂದು ಬಹಳ ವ್ಯಸನಪಟ್ಟನು. ಅದನ್ನು ನೋಡಿ ಬೇಡರವನ ಹೆಂಡತಿ "ಸ್ವಾಮಿ, ನನ್ನ ಹಣೇಬರಹ ಈ ರೀತಿ ಇದ್ದರೆ ಯಾರೇನು ಮಾಡಬಲ್ಲರು. ತಾವೇನೂ ವಿಚಾರಿಸಬೇಡಿ. ನಿಮಗೆ ಹೇಮಾವತಿ ಪಟ್ಟಣಕ್ಕೆ ದಾರಿ ತೋರಿಸುವೆನು ನಡೆಯಿರಿ."

ಎಂದು ಅತನನ್ನು ಕರೆದುಕೊಂಡು ಹೋಗಿ, ದಾರಿ ತೋರಿಸಿ ಮರಳಿ ಬಂದು ಸಹಗಮನ ವನ್ನು ಮಾಡಿದಳು.

ಬ್ರಾಹ್ಮಣನು ಆ ಬೇಡರ ದಂಪತಿಗಳ ಒಳ್ಳೆಯ ನಡತೆಯನ್ನು ನೆನೆನೆನೆದುಕೊಳ್ಳು ತ್ತಾ ಹೇಮಾವತಿ ಪಟ್ಟಣವನ್ನು ಸೇರಿದನು. ಅಲ್ಲಿ ರಾಜನನ್ನು ಕಂಡು, ಪಾರ್ವತಿದೇವಿ ಹೇಳಿದಂತೆ ಆಶೀರ್ವದಿಸಿದನು. "ಹುಟ್ಟಿದ ಕೂಡಲೇ ನಿಮ್ಮ ಮಗುವನ್ನು ಏಕಾಂತವಾಗಿ ನೋಡಲು ನನಗೆ ಅನುಮತಿ ಕೊಡಬೇಕು" ಎಂದು ಕೇಳಲು ರಾಜನು ಸಂತೋಷದಿಂದ ಒಪ್ಪಿಕೊಂಡನು.

ರಾಜನ ಹೆಂಡತಿ ಒಂಬತ್ತು ತಿಂಗಳು ಕಳೆದು ಚಂದಮಾಮನಂತಹ ಮಗನನ್ನು ಹೆತ್ತಳು. ಬ್ರಾಹ್ಮಣನು ಏಕಾಂತವಾಗಿ ಆ ಹುಡುಗನನ್ನು "ಅನ್ನದಾನದಿಂದ ಆಗುವ ಫಲವೇನು ಹೇಳು ಮಗೂ" ಎಂದು ಕೇಳಿದನು.

ಆಗಲೇ ಜನಿಸಿದ ಶಿಶುವಾಗಿದ್ದರೂ, ದೊಡ್ಡ ಮನುಷ್ಯರ ರೀತಿಯಲ್ಲಿ ಆ ಹುಡುಗ ಬ್ರಾಹ್ಮಣನಿಗೆ ಈ ರೀತಿ ಹೇಳಿದ.

"ಹತ್ತು ತಿಂಗಳ ಹಿಂದೆ ನೀವು ಈ ಪಟ್ಟಣಕ್ಕೆ ಬರುವಾಗ ಅಡವಿಯಲ್ಲಿ ದಾರಿ ತಪ್ಪಿರುವಲ್ಲಿ ನಿಮ್ಮನ್ನು ಕರೆದುಕೊಂಡು ಹೋಗಿ ಒಂದು ಹಿಡಿ ಕಡಲೆ ಜೇನುತುಪ್ಪ ಕೊಟ್ಟ ಬೇಡರ ವನೇ ನಾನು. ಇಷ್ಟುಮಾತ್ರ ದಾನಕ್ಕೆ ಈ ರಾಜನ ಮಗನಾಗಿ ಹುಟ್ಟಿ, ರಾಜ್ಯವನ್ನು ಆಳುವವನಿದ್ದೇನೆ. ಒಂದು ದಿನದ ದಾನಕ್ಕೇ ಇಷ್ಟು ಶ್ರೇಷ್ಟ ಫಲವು ಲಭಿಸಿರುವಾಗ, ನಿತ್ಯವೂ ಅನ್ನದಾನ ಮಾಡುವ ಮಹಾನು ಭಾವರಿಗೆ ಇನ್ನೆಂತಹ ಫಲವು ಲಭಿಸುವುದೋ ನೀವೇ ಊಹಿಸಿಕೊಳ್ಳಿ."

ಹೀಗೆ ಹೇಳಿ ಆ ಮಗು ಮರುಕ್ಷಣದಲ್ಲಿ ಏನೂ ಅರಿಯದವನಂತೆ ಕಾವ್, ಕಾವ್' ಎಂದು ಅಳಲು ಮೊದಲುಮಾಡಿತು.

ಬ್ರಾಹ್ಮಣನು ಬಹಳ ಆಶ್ಚರ್ಯಪಟ್ಟು ತನ್ನ ಊರನ್ನು ಸೇರಿಕೊಂಡನು. ನಡೆದ ವಿಷಯ ವನ್ನೆಲ್ಲಾ ತನ್ನ ಹೆಂಡತಿಗೆ ಹೇಳಿದನು. ಆ ದಂಪತಿಗಳು ಅಂದಿನಿಂದ ಎಡಬಿಡದೆ ಅನ್ನ ದಾನ ಮಾಡುತ್ತಾ, ಧನಧಾನ್ಯಸಮೃದ್ಧಿ, ಪುತ್ರಪೌತ್ರಾಭಿವೃದ್ಧಿಯಾಗಿ ಹಾಯಾಗಿ ಸಂಸಾರ ಸಾಗಿಸುತ್ತಿದ್ದರು.






ಪೂರ್ವ ಕಾಲದಲ್ಲಿ ಸಿಂಹಳ ದೇಶದಲ್ಲಿ ಒಬ್ಬ ಹಡಗು ವ್ಯಾಪಾರಿಯಿದ್ದನು. ಆತನಿಗೆ ಜಯಪಾಲನೆಂಬ ಒಬ್ಬನೇ ಮಗ. ಆ ವರ್ತಕನಿಗೆ ಅವಸಾನ ಕಾಲವು ಸನ್ನಿಹಿತವಾದಾಗ ಮಗನನ್ನು ಕರೆದು "ಮಗೂ, ನನ್ನ ತರುವಾಯ ನೀನೂ, ನಮಗೆ ವಂಶಪರಂಪರೆಯಾಗಿ ಬಂದಿರುವ ಹಡಗು ವ್ಯಾಪಾರವನ್ನು ನಡೆಸಿಕೊಂಡು, ಗಣ್ಯ ಮನುಷ್ಯನಾಗಿ ಕೀರ್ತಿ ಉಳಿಸಿಕೊಂಡು ಬರಬೇಕು. ಆದರೆ ನಿನಗೊಂದು ಎಚ್ಚರಿಕೆ ಕೊಡುತ್ತೇನೆ. ಎಷ್ಟು ದೇಶಗಳು ಸುತ್ತಿದರೂ ಮೋಸವಿಲ್ಲ. ಆದರೆ ವಂಚಕಮಹಾಪಟ್ಟಣಕ್ಕೆ ಮಾತ್ರ ಹೋಗಬೇಡ" ಎಂದು ಹೇಳಿದನು.

ತಂದೆಯನ್ನು ಸಂತೋಷಪಡಿಸಲು ಜಯಪಾಲನು 'ಸರಿ' ಎಂದು ತಲೆ ಆಡಿಸಿದನು. ಕೆಲದಿನಗಳಲ್ಲಿ ವರ್ತಕನು ತೀರಿಹೋದನು. ತಂದೆ ತೀರಿಹೋದ ಕೂಡಲೇ ಜಯಪಾಲನು ಸರ್ವಸ್ವತಂತ್ರನಾದನು. ಈಗ ಆತನಿಗೆ ಆತಂಕವೇನಿಲ್ಲ. ಆದ್ದರಿಂದ ಜಯಪಾಲನು ತನ್ನ ಇಷ್ಟಬಂದ ಕಡೆ ಹೋಗಬಹುದೆಂದು ಸಂತೋಷಪಟ್ಟನು. ಹುಡುಗತನ; ಅದರ ಮೇಲೆ ವಿಶೇಷಗಳನ್ನು ಕಂಡುಹಿಡಿಯುವ ಕುತೂಹಲ; ಅಲ್ಲವೆ?

ಯಾವ ಪಟ್ಟಣಕ್ಕೆ ತನ್ನ ತಂದೆ ಹೋಗಬೇಡವೆಂದು ಸಾರಿ ಸಾರಿ ಬುದ್ಧಿ ಹೇಳಿದನೋ ಆ ವಂಚಕಮಹಾಪಟ್ಟಣಕ್ಕೆ ಹೋಗಿಬರಬೇಕು ಎಂದು ಜಯಪಾಲನಿಗೆ ಅಭಿಲಾಷೆ ಉಂಟಾಯಿತು. ಈ ಉದ್ದೇಶದಿಂದ, ನಾಲ್ಕು ಹಡಗುಗಳಲ್ಲಿ ಬಹಳ ಬೆಲೆ ಬಾಳುವ ಸರಕುಗಳನ್ನು ತುಂಬಿಕೊಂಡು, ಆತನು ವ್ಯಾಪಾರ ನಿಮಿತ್ತ ಪ್ರಯಾಣ ಬೆಳೆಸಿದನು.

ಸಮುದ್ರದ ಮೇಲೆ ಒಂಭತ್ತು ಹಗಲುಗಳೂ, ಒಂಭತ್ತು ರಾತ್ರಿಗಳೂ ಪ್ರಯಾಣ ಮಾಡಿ ಜಯಪಾಲನು ವಂಚಕಮಹಾಪಟ್ಟಣವನ್ನು ಸೇರಿದನು. ಆ ಪಟ್ಟಣದ ರೇವಿನಲ್ಲಿ ಬೆಸ್ತರವನು ಮೀನು ಹಿಡಿಯುತ್ತಿದ್ದನು.

ರಂಗರಾಜು, ಬೆಂಗಳೂರು.




ಅಲ್ಲಿಗೆ ಹತ್ತಿರದಲ್ಲಿಯೇ ಒಂದು ಬಕವು ಸಮುದ್ರದಲ್ಲಿ ಮುಳುಗುತ್ತಾ, ತೇಲುತ್ತಾ ಮೀನುಗಳನ್ನು ಹಿಡಿದು ತಿನ್ನುತ್ತಿತ್ತು. ಬಿಲ್ಲು ವಿದ್ಯೆಯಲ್ಲಿ ಕುಶಲನಾದ ಜಯಪಾಲನು ತನ್ನ ಬಾಣದಿಂದ ಆ ಬಕವನ್ನು ಕೊಂದನು.

ಬಕವು ಸತ್ತು ನೀರಿನಲ್ಲಿ ತೇಲುತ್ತಿರುವಲ್ಲಿ ಬೆಸ್ತರವನು ಓಡುತ್ತಾ ಬಂದು "ಏನಪ್ಪಾ, ಈ ಅನ್ಯಾಯ. ಸತ್ತುಹೋದ ನನ್ನ ತಂದೆ ಬಕದ ರೂಪ ಹೊಂದಿ ನನಗೆ ಮೀನು ಹಿಡಿಯುವುದನ್ನು ಕಲಿಸುತ್ತಿದ್ದರೆ, ನೀನು ಬಂದು ಕಾರಣವಿಲ್ಲದೇ ಆತನನ್ನು ಕೊಂದು, ನನಗೆ ಅಪಕಾರ ಮಾಡಿರುವೆ. ರಾಜರ ಹತ್ತಿರಕ್ಕೆ ನಡೆ. ನಿನ್ನ ಮೇಲೆ ಫಿರ್ಯಾದು ಮಾಡುವೆನು" ಎಂದು ಎಳೆದುಕೊಂಡುಹೋದನು.

ರಾಜನು ವಿಚಾರಣೆ ನಡೆಸಿ ಬೆಸ್ತರವನಿಗೆ ಜಯಪಾಲನು ಒಂದು ಹಡಗನ್ನು ನಷ್ಟ ಪರಿಹಾರವಾಗಿ ಕೊಡಬೇಕೆಂದು ತೀರ್ಪನ್ನಿತ್ತನು. ಜಯಪಾಲನ ನಾಲ್ಕು ಹಡಗುಗಳಲ್ಲಿ ಒಂದು ಹೋಯಿತು.

ಈ ಪಟ್ಟಣದ ರಾಜನ ತೀರ್ಪು ತಮಾಷೆಯಾಗಿದೆ ಅಂದುಕೊಂಡು ನಸುನಗುತ್ತಾ ಜಯಪಾಲನು ದರ್ಬಾರನ್ನು ಬಿಟ್ಟು ಹೊರಗೆ ಬರುವಲ್ಲಿ ಒಂದು ಕಿವಿಯಿಲ್ಲದಾತನೊಬ್ಬನು ಎದುರಾದನು. "ಒಹೋ, ಎಷ್ಟು ದಿನಕ್ಕೆ ಕಾಣಿಸಿದಿಯಪ್ಪಾ. ನಿನ್ನ ತಂದೆಯ ಹತ್ತಿರ ನನ್ನ ಕಿವಿಯೊಂದನ್ನು ಅಡವು ಇಟ್ಟಿದ್ದೇನೆ. ಅದು ಇಂದಿಗೆ ಬಡ್ಡಿಯೊಂದಿಗೆ ನಾಲ್ಕುಸಾವಿರ ಹೊನ್ನುಗಳಾಗಿವೆ. ಇದೋ, ನಿನ್ನ ಹಣ ತೆಗೆದುಕೊಂಡು ನನ್ನ ಕಿವಿ ನನಗೆ ಕೊಡು." ಎಂದು ಅಡ್ಡ ಬಂದನು.

ಜಯಪಾಲನಿಗೆ ದಿಕ್ಕೇ ತೋರಲಿಲ್ಲ. ಮುಖ ಬಿಳಿಚಿಕೊಂಡಿತು. ಜಯಪಾಲನು ಬೆಪ್ಪನಂತಿರುವುದನ್ನು ಕಂಡು ಕಿವಿಯಿಲ್ಲದಾತನು ರಾಜನಲ್ಲಿ ದೂರು ಕೊಟ್ಟನು.

ರಾಜನು ವಿಚಾರಣೆ ನಡೆಸಿ, ಈ ಸಲವೂ ಜಯಪಾಲನೇ ತಪ್ಪಿತಸ್ಥನೆಂದು ನಿರ್ಣಯಿಸಿ, ಕಿವಿಗೆ ಬದಲಾಗಿ ಒಂದು ಹಡಗನ್ನು ಕಿವಿಯಿಲ್ಲದವನಿಗೆ ಕೊಡಬೇಕೆಂದು ಆಜ್ಞಾಪಿಸಿದನು. ಈ ವಿಧವಾಗಿ ಜಯಪಾಲನ ಉಳಿದ ಮೂರು ಹಡಗುಗಳಲ್ಲಿ ಮತ್ತೊಂದು ಹೋಯಿತು.

ಜಯಪಾಲನು ಉದ್ವಿಗ್ನನಾಗದೆ ಈ ವಿಚಿತ್ರಕ್ಕೆ ವಿನೋದಿಸುತ್ತಾ ತನ್ನ ದಾರಿ ಹಿಡಿದು ಹೋಗುತ್ತಿದ್ದನು. ಒಬ್ಬ ಹೆಂಗಸು ಆತನ ಎದುರಾದಳು. "ಏನಪ್ಪಾ ಮಗು, ಎಷ್ಟು ದಿನಕ್ಕೆ ಕಾಣಿಸಿದೆಯಪ್ಪಾ. ಬಹಳ ಚೆನ್ನಾಗಿದೆ. ನಾನಾರೆಂದುಕೊಂಡೆ? ಹದಿನೇಳು ವರ್ಷಗಳ ಕೆಳಗೆ ನಿಮ್ಮಪ್ಪ ನನ್ನನ್ನು ಗಂಧರ್ವ ವಿವಾಹ ಮಾಡಿಕೊಂಡು ನನ್ನ ಕಡೆ ನೋಡದೆ ಬಿಟ್ಟುಬಿಟ್ಟ. ನಾನು ಜೀವನಾಧಾರಕ್ಕೆ ತಗಾದೆ ಹೂಡಿದ್ದಕ್ಕೆ 'ನನ್ನ ಮಗನ ಕೈಯ್ಯಲ್ಲಿ ಹತ್ತು ಸಾವಿರ ವರಹಗಳನ್ನು ಕಳುಹಿಸುವೆನು' ಎಂದು ಹೇಳಿದ. ಆದ್ದರಿಂದ ಆ ಹಣವನ್ನು ಕೊಟ್ಟು ಮುಂದಕ್ಕೆ ನಡೆ." ಎಂದು ಆಕೆ ಆತನನ್ನು ತಡೆದಳು.

"ನೀನು ಯಾರು? ನಿನ್ನ ಹಣವೇನು? ನನಗೇನೂ ತಿಳಿಯದು. ಬಿಡು ದಾರಿ" ಎಂದು ಜಯಪಾಲನು ಮುಂದೆ ಹೊರಟನು. ಆಕೆ ಒಡನೆ ರಾಜನಿಗೆ ದೂರು ಕೊಟ್ಟಳು.

ಈ ಸಾರಿ ರಾಜನು ಮತ್ತೆ ವಿಚಾರಣೆ ಮಾಡಿ ಜಯಪಾಲನೇ ಅಪರಾಧಿ ಎಂದು ತೀರ್ಮಾನಿಸಿ ಆ ಸ್ತ್ರೀಗೆ ಒಂದು ಹಡಗು ಕೊಡಬೇಕೆಂದು ಅಜ್ಞಯಿತ್ತನು.

ಹೀಗಾಗಿ ಜಯಪಾಲನ ಹಡಗುಗಳಲ್ಲಿ ಮೂರು ಹೋಗಿ ಒಂದೇ ಒಂದು ಮಾತ್ರ ಉಳಿಯಿತು.

ತಂದೆ ಹೇಳಿದ್ದ ಮಾತನ್ನು ಕೇಳದಿದ್ದಕ್ಕೆ ಒಳ್ಳೆ ಶಾಸ್ತಿ ಆಯಿತೆಂದುಕೊಂಡ ಜಯಪಾಲ.



ಇಷ್ಟರಲ್ಲಿ ಒಬ್ಬ ಹಜಾಮ ಆ ದಾರಿಯಲ್ಲೇ ಹೋಗುತ್ತಿರುವುದನ್ನು ನೋಡಿ "ಆದದ್ದು ಆಯಿತು. ಎರಡು ದಿನಗಳಿಂದ ಕ್ಷೌರವಿಲ್ಲ. ಶುಭ್ರವಾಗಿ ಕ್ಷೌರವನ್ನಾದರೂ ಮಾಡಿಸಿಕೊಳ್ಳೋಣ" ಎಂದು ಹಜಾಮನನ್ನು ಕೂಗಿ ಕ್ಷೌರ ಮಾಡಲು ಕೇಳಿದನು.

"ಅಯ್ಯಾ ಏನು ಕೊಡುವಿರಿ" ಎಂದ ಹಜಾಮ. "ನಿನಗೇಕೋ ಅನುಮಾನ. ನಿನ್ನನ್ನು ಸಂತೋಷಪಡಿಸಿದರೆ ಆಯಿತು ತಾನೇ?" ಎಂದು ಜಯಪಾಲನು ಅವನನ್ನು ಒಪ್ಪಿಸಿ ಕ್ಷೌರ ಮಾಡಿಸಿಕೊಂಡನು.

ನಾಪಿತನು ತನ್ನ ಕೆಲಸ ಮುಗಿಸಿದನು. ಜಯಪಾಲನು ಆತನಿಗೆ ಐದುವರಹ ಕೊಡಲು ಹೋದನು. ನಾಪಿತ ತೆಗೆದುಕೊಳ್ಳಲಿಲ್ಲ.



ಮತ್ತೆ ಐದು ವರಹಗಳನ್ನು ಕೊಟ್ಟ. ಆತ ತೆಗೆದುಕೊಳ್ಳಲಿಲ್ಲ; ನಾಪಿತ ಎಷ್ಟು ಕೊಟ್ಟರೂ ಸಾಲದೆಂದು ಹಣ ತೆಗೆದುಕೊಳ್ಳದೆ ಹಟ ಹಿಡಿದ. ರಾಜನ ಹತ್ತಿರ ಹೋಗಿ "ನನ್ನನ್ನು ಸಂತೋಷಪಡಿಸುವೆನೆಂದು ಹೇಳಿ ಈತನು ತನ್ನ ಕೆಲಸ ಮಾಡಿಸಿಕೊಂಡ. ಆದರೆ ಸಂತೋಷಪಡಿಸಲಾರದಾದ" ಎಂದು ಆರೋಪಿಸಿದನು.

ಈ ದೂರನ್ನೂ ವಿಚಾರಿಸಿ ಜಯಪಾಲನೇ ದೋಷಿ ಎಂದು ರಾಜನು ತೀರ್ಪಿತ್ತನು. ನಾಪಿತನಿಗೆ ಪರಿಹಾರ ರೂಪದಲ್ಲಿ ಒಂದು ಹಡಗನ್ನು ಕೊಡಬೇಕೆಂದನು. ಜಯಪಾಲನು ತನ್ನ ಹತ್ತಿರ ಮಿಕ್ಕಿದ್ದ ಹಡಗನ್ನು ನಾಪಿತನಿಗೆ ವಹಿಸಿಕೊಟ್ಟನು. ಹೀಗೆ ತಾನು



ತಂದಿದ್ದ ನಾಲ್ಕು ಹಡಗುಗಳು ವಂಚಕರ ಪಟ್ಟಣದಲ್ಲಿ ಫಿರ್ಯಾದಿಗಳಿಗೆ ಸಮರ್ಪಿಸಿ ಜಯಪಾಲನು ನಿರ್ಭಾಗ್ಯನಾಗಿ ದಿಕ್ಕೇ ತೋರದೆ ಸಮುದ್ರ ತೀರದಲ್ಲಿ ಶೋಕಪೂರಿತನಾಗಿ ಕುಳಿತನು.

ಅಲ್ಲೊಬ್ಬ ಸನ್ಯಾಸಿ ಕಾಣಿಸಿದನು. ಆತನು ಈ ಹುಡುಗನ ಸಂಕಟವನ್ನು ಗ್ರಹಿಸಿ "ಜಯಪಾಲ, ನಿನ್ನ ಕಳವಳಕ್ಕೆ ಕಾರಣವೇನೆಂಬುದನ್ನು ನನ್ನೊಂದಿಗೆ ಹೇಳು. ನಾನು ಮಾಡಬಲ್ಲ ಸಹಾಯವೇನಾದರೂ ಇದ್ದರೆ ಮಾಡುವೆನು" ಎಂದನು. ಆಗ ಅವನಿಗೆ ಸ್ವಲ್ಪ ಧೈರ್ಯ ಬಂತು. ತನ್ನ ವಿಷಯವನ್ನೆಲ್ಲಾ ಆತನಿಗೆ ವಿವರಿಸಿ ಹೇಳಿದನು. ಸನ್ಯಾಸಿ ಅದನ್ನು ಕೇಳಿ ಜಯಪಾಲನ ಕಿವಿಯಲ್ಲಿ ಯಾವುದೋ ಯುಕ್ತಿ ಹೇಳಿ ಕೈಯ್ಯಲ್ಲಿ ಒಂದು ರತ್ನಹಾರವನ್ನು ಕೊಟ್ಟು "ಹೋಗು, ಮಗು. ಇನ್ನು ನಿನಗೆಲ್ಲಾ ಜಯವಾಗುವುದು" ಎಂದು ಆಶೀರ್ವದಿಸಿದನು.

ಸಂತೋಷದಿಂದ ಜಯಪಾಲನು ರಾಜನ ಅರಮನೆಗೆ ಹೋಗಿ ಅಲ್ಲಿ ಆಟವಾಡುತ್ತಿದ್ದ ರಾಜಕುವರನ ಕೊರಳಲ್ಲಿ ತನ್ನ ಹತ್ತಿರವಿದ್ದ ರತ್ನಹಾರವನ್ನು ಹಾಕಿದನು.

ಅಂದವಾದ, ಅಮೂಲ್ಯವಾದ ಹಾರವನ್ನು ಬಹುಮಾನ ಮಾಡಿದ ಜಯಪಾಲನನ್ನು ಮೆಚ್ಚಿಕೊಂಡು ರಾಜನು "ನಮಗೆ ಬಹಳ ಸಂತೋಷವಾಯಿತು. ನಿನಗೇನು ಬೇಕೋ ಕೇಳಿಕೋ" ಎಂದನು.



ಆಗ ಆತನು ವಿನಯದಿಂದ ಎರಡು ಕೈಗಳನ್ನೂ ಜೋಡಿಸಿ "ಮಹಾರಾಜ, ತಾವು ಧರ್ಮಪ್ರಭುಗಳು. ನನ್ನ ದಿನಗಳು ಕೆಟ್ಟವಾಗಿದ್ದಿರಬಹುದು. ಆದ್ದರಿಂದ ನನ್ನ ಮೇಲೆ ಅನ್ಯಾಯವಾಗಿ ನಾಲ್ಕು ತಪ್ಪುಗಳನ್ನು ಹೊರಿಸಲ್ಪಟ್ಟು ನಾನು ವ್ಯಾಪಾರಕ್ಕಾಗಿ ತಂದಿದ್ದ ನಾಲ್ಕು ಹಡಗುಗಳೂ ನಿಮ್ಮ ರಾಜ್ಯದಲ್ಲಿ ಫಿರ್ಯಾದಿಗಳಿಗೆ ಪರಿಹಾರ ರೂಪದಲ್ಲಿ ಕೊಡಬೇಕಾಗಿ ಬಂದಿತು. ಈ ತಪ್ಪುಗಳನ್ನು ಆಳುವ ಮಹಾಸ್ವಾಮಿಯವರು ಪುನರ್ವಿಚಾರಣೆ ಮಾಡಿ ನ್ಯಾಯ ಸ್ಥಾಪಿಸಬೇಕಾಗಿ ಪ್ರಾರ್ಥನೆ" ಎಂದು ಕೇಳಿಕೊಂಡನು.

ರಾಜನು ಇದಕ್ಕೆ ಒಪ್ಪಿಕೊಂಡನು. ನಾಲ್ಕು ಅಪರಾಧಗಳಿಗೂ ಸಂಬಂಧಿಸಿದ ಫಿರ್ಯಾದಿಗಳನ್ನು ಹಾಜರು ಮಾಡಿಸಿದನು. ಜಯಪಾಲನು ಏನಾದರೂ ಹೇಳುವುದಿದ್ದಲ್ಲಿ ಹೇಳುವಂತೆ ಆಜ್ಞೆ ಮಾಡಿದನು.

ಆಗ ಜಯಪಾಲನು ನಾಲ್ಕು ದೂರುಗಳನ್ನು ಕುರಿತು ವಿವರಗಳನ್ನು ರಾಜನಿಗೆ ಈ ರೀತಿ ಮನವಿ ಮಾಡಿಕೊಂಡನು.

"ಮಹಾಸ್ವಾಮಿ, ನಮ್ಮ ತಂದೆ ಮೀನಿನ ರೂಪದಲ್ಲಿ ಸಮುದ್ರದ ಮೇಲೆ ಹಡಗು ನಡೆಸುವುದನ್ನು ಕಲಿಸುತ್ತಿರುವಾಗ್ಗೆ ಈ ಬೆಸ್ತರವನ ತಂದೆ ಬಕರೂಪದಲ್ಲಿ ಬಂದು ನನ್ನ ತಂದೆಯನ್ನು ನುಂಗಿಬಿಟ್ಟನು. ಆದ್ದರಿಂದ ನಾನು ಬಾಣದಿಂದ ಬಕವನ್ನು ಕೊಲ್ಲಬೇಕಾಯಿತು." ಎಂದು ಮೊದಲನೇ ತಪ್ಪಿಗೆ





ಸಮಾಧಾನವಿತ್ತನು. ರಾಜನು ಸಂತೋಷಪಟ್ಟು ಹಳ್ಳಿಯವನಿಂದ ಜಯಪಾಲನಿಗೆ ಹಡಗನ್ನು ಹಿಂದಕ್ಕೆ ಕೊಡಿಸಿದನು.

ತರುವಾಯ ಕಿವಿಯಿಲ್ಲದಾತ ಬಂದ. "ಮಹಾಪ್ರಭೂ, ನನ್ನ ತಂದೆ ಹಲವಾರು ಕಿವಿಗಳನ್ನು ಗಿರವಿ ಇಟ್ಟುಕೊಂಡಿದ್ದಾರೆ. ಅದರಲ್ಲಿ ಈತನ ಕಿವಿ ಯಾವುದೋ ಗುರುತು ಹಿಡಿಯುವುದು ಕಷ್ಟ. ಆ ಎರಡನೇ ಕಿವಿ ನನ್ನ ಕೈಗೆ ಕೊಟ್ಟ ಪಕ್ಷದಲ್ಲಿ ಆತನ ಕಿವಿಯನ್ನು ಹುಡುಕಿ ಕೊಡುವೆನು." ಎಂದು ಜಯಪಾಲ ಹೇಳಿದನು. ಕಿವಿಯಿಲ್ಲದಾತನು ತನ್ನ ಎರಡನೇ ಕಿವಿಯನ್ನು ಕೊಡಲು ಭಯಪಟ್ಟನು. ಆದ್ದರಿಂದ ತಪ್ಪು ಅವನದೆಂದು, ಅವನಿಂದ ರಾಜನು ಹಡಗನ್ನು ಮತ್ತೆ ಜಯಪಾಲನಿಗೆ ಕೊಡಿಸಿದನು.



ಗಂಧರ್ವ ವಿವಾಹವಾದ ಸ್ತ್ರೀಯು ಬಂದಳು. ಆಗ ಜಯಪಾಲನು "ಮಹಾರಾಜ, ಈಕೆಗೆ ಹತ್ತು ಸಾವಿರ ವರಹ ಕೊಡುವಂತೆ ನಮ್ಮ ತಂದೆಯವರು ಹೇಳಿದ ಮಾತು ನಿಜ. ಆದರೆ ನಮ್ಮ ಕುಲಾಚಾರದ ಪ್ರಕಾರ ಗಂಡನೊಂದಿಗೆ ಹೆಂಡತಿ ಸಹಗಮನ ಮಾಡಬೇಕು. ಈಗಲಾದರೂ ಸರಿ, ಈಕೆ ಆ ಕೆಲಸ ಮಾಡಿದ ಪಕ್ಷದಲ್ಲಿ ಒಪ್ಪಂದದಂತೆ ಹಣವನ್ನು ಆಕೆಯ ವಾರಸುದಾರರಿಗೆ ಕೊಡಲು ನನ್ನ ಅಭ್ಯಂತರವೇನೂ ಇಲ್ಲ!" ಎಂದನು. ಆ ಸ್ತ್ರೀ ಪ್ರಾಣ ಬಿಡಲು ಸಿದ್ಧ ಳಿರಲಿಲ್ಲ. ಆದ್ದರಿಂದ ಆಕೆಯಿಂದ ಮೂರನೆಯ ಹಡಗು ಜಯಪಾಲನ ವಶವಾಯಿತು.

ಕೊನೆಯಲ್ಲಿ ಹಜಾಮ ಬಂದ. ಆಗ ಜಯಪಾಲನು ಎಲ್ಲವನ್ನೂ ಮೀರಿಸಿದ ಒಂದು ವಿಚಿತ್ರ ಮಾಡಿದನು. ತುಂಬಿದ ಸಭೆಯಲ್ಲಿ ರಾಜಕುಮಾರನನ್ನು ಎತ್ತಿಕೊಂಡು ಮುದ್ದಾಡುತ್ತಾ "ಈ ಮಗು ರತ್ನಹಾರವನ್ನು ಹಾಕಿಕೊಂಡಿರುವುದು ನಿಮಗೆ ಸಂತೋಷವಾಗಿರುವುದೇ?" ಎಂದು ಸಭೆಯಲ್ಲಿ ಕುಳಿತಿದ್ದ ಪ್ರತಿಯೊಬ್ಬರನ್ನೂ ಕೇಳಿಕೊಂಡುಬಂದ. ಎಲ್ಲರೂ "ಸಂತೋಷವಾಗಿದೆ" ಎಂದರು. ಕೊನೆಯಲ್ಲಿ ತನಗೆ ಕ್ಷೌರ ಮಾಡಿದ ನಾಪಿತನನ್ನು ಕೇಳಿದನು. ಅದಕ್ಕೆ ಅವನೂ ಸಹ "ಸಂತೋಷವಾಗಿದೆ ಸ್ವಾಮಿ" ಎಂದನು. ಕೂಡಲೇ ಜಯಪಾಲನು "ಮಹಾಸ್ವಾಮಿ, ಈಗ ನಾನು ಮಾಡಿದ ಕೆಲಸ ಸಂತೋಷವಾಗಿದೆ ಎಂದು ನಾಪಿತನು ತಾನೇ ಒಪ್ಪಿಕೊಂಡಿರುವುದನ್ನು ನೀವೆಲ್ಲರೂ ಕೇಳಿರುವಿರಿ." ಎಂದು ಹೇಳಲು, ರಾಜನು ಸಂತೋಷಪಟ್ಟು ನಾಪಿತನಿಂದ ಜಯಪಾಲನ ಹಡಗನ್ನು ಅವನಿಗೇ ಕೊಡಿಸಿಕೊಟ್ಟನು.

ಈ ವಿಧವಾಗಿ ವಂಚಕರಿಂದ ಉಂಟಾದ ಕಷ್ಟನಷ್ಟಗಳನ್ನು ಜಯಪಾಲನು ಸನ್ಯಾಸಿಯ ಆಶೀರ್ವಾದ ಬಲ ಮತ್ತು ಯುಕ್ತಿಯಿಂದ ಪರಿಹರಿಸಿಕೊಂಡು ನಾಲ್ಕು ಹಡಗುಗಳನ್ನೂ ಮತ್ತೆ ಪಡೆದು ವ್ಯಾಪಾರದಲ್ಲಿ ಬಹಳವಾಗಿ ಲಾಭ ಪಡೆದು, ಸುಖವಾಗಿ ತನ್ನ ಮನೆ ಸೇರಿಕೊಂಡನು.






ನಮ್ಮೂರ ಬಳಿ ಗ್ರಾಮದಲ್ಲಿ ಅವಧಾನಿಗಳೂ ಅವರ ಪತ್ನಿಯೂ ವಾಸವಾಗಿದ್ದರು.

ತೀರ್ಥಯಾತ್ರೆ ಮಾಡಿಕೊಂಡು ಬರುವ ಉದ್ದೇಶದಿಂದ ಅವಧಾನಿಗಳು ಶ್ರಮ ಪಟ್ಟು ಮುನ್ನೂರು ರೂಪಾಯಿಗಳನ್ನು ಶೇಖರಿಸಿದರು. ಇನ್ನೂರು ರೂಪಾಯಿ ದಾರಿ ಖರ್ಚಿಗೆಂದು ತೆಗೆದುಕೊಂಡರು. ಮಿಕ್ಕ ನೂರು ರೂಪಾಯಿಗಳನ್ನು ಹಿಂದಿರುಗಿದಮೇಲೆ ತೆಗೆದುಕೊಳ್ಳೋಣವೆಂದು ಒಂದು ಮಡಕೆಯಲ್ಲಿ ಹಾಕಿ, ಬಾಯಿ ಬಿಗಿಸಿ, ಭದ್ರವಾಗಿಡುವಂತೆ ಆ ಊರಿನಲ್ಲಿ ಪ್ರಸಿದ್ಧಿ ಪಡೆದ ಬೋರಯ್ಯಶೆಟ್ಟಿಯ ಕೈಯ್ಯಲ್ಲಿ ಕೊಟ್ಟರು.

ಅವಧಾನಿಗಳು ಕುಟುಂಬ ಸಮೇತವಾಗಿ ಯಾತ್ರೆಗೆ ಹೋದ ಕೂಡಲೇ, ಬೋರಯ್ಯ ಶೆಟ್ಟಿಗೆ ಆ ಹಣವನ್ನು ಎಗರಿಸಬೇಕೆಂಬ ದುರಾಸೆ ಹುಟ್ಟಿತು. ಕೂಡಲೇ ಆ ಹಣವನ್ನು ತೆಗೆದು ಅದಕ್ಕೆ ಬದಲಾಗಿ ಕಲ್ಲು ಮಣ್ಣು ತುಂಬಿ ಯಥಾಪ್ರಕಾರ ಬಾಯಿ ಕಟ್ಟಿ ಇಟ್ಟ.

ಗಂಡನು ಮಾಡುತ್ತಿದ್ದ ದ್ರೋಹವನ್ನು ನೋಡಿ ಶೆಟ್ಟಿಯ ಹೆಂಡತಿ "ಇಂತಹ ಕೆಲಸ ಮಾಡಬೇಡಿ. ಇದು ನಮಗೆ ತರವಲ್ಲ" ಎಂದು ಪರಿಪರಿವಿಧದಲ್ಲಿ ಹೇಳಿದಳು. ಆದರೆ ಶೆಟ್ಟಿ ಕೇಳಲಿಲ್ಲ.

ಕೆಲವು ದಿನಗಳಾದಮೇಲೆ ಅವಧಾನಿಗಳು ಯಾತ್ರೆಮುಗಿಸಿಕೊಂಡು ಬಂದು ಬೋರಯ್ಯ ಶೆಟ್ಟಿಯ ಹತ್ತಿರಹೋಗಿ ತಮ್ಮ ಮಡಕೆಯನ್ನು ಹಿಂದಕ್ಕೆ ಪಡೆದರು. ಆದರೆ ಮುಚ್ಚಳ ತೆಗೆದು ನೋಡಿದರೆ ರೂಪಾಯಿಗಳಿಗೆ ಬದಲು ಕಲ್ಲು ಮಣ್ಣು ಇತ್ತು! ಅವಧಾನಿ ದಂಪತಿಗಳು ಗೋಳೋ ಎಂದುಗೋಳಾಡುತ್ತಾ ಗ್ರಾಮಾಧಿಕಾರಿಯ ಹತ್ತಿರ ದೂರು ಕೊಟ್ಟರು.

ಗ್ರಾಮಾಧಿಕಾರಿ ವಿಷಯವನ್ನು ಕೇಳಿದ. ಹೇಗೆ ತೀರ್ಪು ಕೊಡಬೇಕೋ ತಿಳಿಯದಾಯಿತು. ಹಾಗೇ ಯೋಚಿಸುತ್ತಾ ಕುಳಿತಿದ್ದ. ಆತನ ಮಗಳು ಬಹಳ ಸೂಕ್ಷ್ಮಬುದ್ಧಿಯುಳ್ಳವಳು. ಏನೂ ವಿಚಾರಪಡಬೇಕಾಗಿಲ್ಲವೆಂದು ಧೈರ್ಯ ಹೇಳಿ, ತಾನೇ ಈ ಜಗಳವನ್ನು ತೀರ್ಮಾನಿಸುತ್ತೇನೆಂದಳು.

ಮರುದಿನ ಅಪ್ಪಣೆಯಂತೆ ಅವಧಾನಿ ದಂಪತಿಗಳೂ ಶೆಟ್ಟಿ ದಂಪತಿಗಳೂ,

ಹೆಚ್. ಶಾಂತ, ಮಂಗಳೂರು.

ಗ್ರಾಮಾಧಿಕಾರಿಯ ಮನೆಯ ಅಂಗಳದಲ್ಲಿ ಹಾಜರಾದರು. ಅಲ್ಲಿ ಮುಚ್ಚಳ ಹಾಕಿದ್ದ ನಾಲ್ಕು ಮಕ್ಕರಿಗಳು ಸಿದ್ಧವಾಗಿದ್ದವು.

ತನ್ನ ಮಗಳ ಸಲಹೆಯ ಪ್ರಕಾರ ಗ್ರಾಮಾಧಿಕಾರಿ ಆ ಮಕ್ಕರಿಗಳಲ್ಲಿ ಎರಡನ್ನು ಅವಧಾನಿ ದಂಪತಿಗಳ ತಲೆಯ ಮೇಲೂ, ಮಿಕ್ಕೆರಡು ಮಕ್ಕರಿಗಳನ್ನು ಶೆಟ್ಟಿ ದಂಪತಿಗಳ ತಲೆಯ ಮೇಲೂ, ಹೊರಿಸಿದನು. "ನೀವು ನಾಲ್ಕು ಜನವೂ ಈ ಮಕ್ಕರಿಗಳನ್ನು ಹೊತ್ತುಕೊಂಡು ಅಲ್ಲಿ ಕಾಣಿಸುವ ಆಲದ ಮರದ ಹತ್ತಿರ ಹೋಗಿಬಿಟ್ಟು ಬನ್ನಿ, ಆಮೇಲೆ ತೀರ್ಪು ಹೇಳುತ್ತೇನೆ." ಎಂದು ಹೇಳಿ ಗ್ರಾಮಾಧಿಕಾರಿ ಅವಧಾನಿ ದಂಪತಿಗಳನ್ನು ಪೂರ್ವದಿಕ್ಕಿಗೂ, ಶೆಟ್ಟಿ ಆತನ ಭಾರ್ಯೆಯನ್ನು ಪಶ್ಚಿಮ ದಿಕ್ಕಿಗೂ ಕಳುಹಿಸಿದನು.

ಆ ಪ್ರಕಾರ ಅವರೆಲ್ಲರೂ ಹೊರಟರು. ಅವರು ಹೋಗುತ್ತಾ ಬಾಯಿ ಸುಮ್ಮನಿರುತ್ತದೆಯೆ? ಅವರವರ ತಪ್ಪನ್ನು ಕುರಿತು ಅವರು ಮಾತನಾಡಿಕೊಂಡರು. "ಹೇಳಿದರೆ ಕೇಳಲಿಲ್ಲ. ಪಾಪ, ಬ್ರಾಹ್ಮಣನಿಗೆ ಮೋಸ ಮಾಡಿದಿರಿ" ಎಂದು ಅಂದಳು ಶೆಟ್ಟಿಯ ಹೆಂಡತಿ. "ಒಂದು ನಿಮಿಷ ಸುಮ್ಮನಿರೇ! ತಪ್ಪು ಗೊತ್ತಾಗಲಾರದು." ಎಂದ ಶೆಟ್ಟಿ. ಈಕಡೆ "ನಮ್ಮ ಹಣ ಹೋಗಿದ್ದಲ್ಲದೆ ಈ ಹೊರೆ ಬೇರೆ ಹೊರಬೇಕಾಗಿಬಂತು" ಎಂದಳು ಅವಧಾನಿ ಹೆಂಡತಿ. "ಪೂರ್ವ ಜನ್ಮದ ಫಲ" ಎಂದರು ಅವಧಾನಿಗಳು.

ನಾಲ್ಕು ಜನವೂ ಮತ್ತೆ ಗ್ರಾಮಾಧಿಕಾರಿಯ ಹತ್ತಿರ ಬಂದು ತಮ್ಮ ತಮ್ಮ ಮಕ್ಕರಿಗಳನ್ನು ಕೆಳಗೆ ಇಟ್ಟರು. ಆತನ ಮಗಳು ಮಕ್ಕರಿಗಳ ಮುಚ್ಚಳಗಳನ್ನು ತೆಗೆಯಲು ನಾಲ್ಕು ಹುಡುಗರು ಕೈಯ್ಯಲ್ಲಿ ಕಾಗದಗಳನ್ನಿಟ್ಟುಕೊಂಡು ಹೊರಗೆ ಬಂದರು. ಆ ಕಾಗದಗಳ ಮೇಲೆ ಆ ದಂಪತಿಗಳು ಆಡಿಕೊಂಡಿದ್ದ ಮಾತುಗಳು ಸ್ಪಷ್ಟವಾಗಿ ಬರೆದಿದ್ದುವು. ಆಗ ಗ್ರಾಮಾಧಿಕಾರಿಗೆ ನಿಜಾನಿಜಗಳು ತಿಳಿದು ಅವಧಾನಿಗಳ ಹಣವನ್ನು ಅವರಿಗೆ ಕೊಡಿಸಿ ಕೊಟ್ಟು, ಶೆಟ್ಟಿಯನ್ನು ಸೆರೆಮನೆಗೆ ಕಳುಹಿಸಿದನು. ನೋಡಿದಿರಾ! ಬುದ್ಧಿವಂತಿಕೆ ಎಂದರೆ ಇದು.





# ಹೂವಿನ ಕೋಟೆ

ಒಬ್ಬ ರಾಜ. ಆ ರಾಜನಿಗೆ ಒಬ್ಬನೇ ಮಗ. ಆತನ ಹೆಸರು ಬುದ್ಧಿಸಾಗರ. ದಿನಂಪ್ರತಿ ಸಾಯಂಕಾಲ ಅಶ್ವಶಾಲೆಗೆ ಹೋಗಿ, ಪಂಚಕಲ್ಯಾಣಿಯನ್ನು ತಾನೇ ತೆಗೆದುಕೊಂಡು ಸವಾರಿ ಮಾಡುವುದು ಆತನಿಗೆ ಮಾಮೂಲಾಗಿದ್ದಿತು.

ಒಂದು ದಿನ ಆತನು ಅಶ್ವಶಾಲೆಗೆ ಹೋಗುವಲ್ಲಿ, ಒಂದು ಸಣ್ಣ ಚಿಕ್ಕಿನ ಮರಿ ಕಾಣಿಸಿತು. ಅದು "ರಾಜಕುಮಾರ, ಶೀಘ್ರದಲ್ಲಿ ನಿನ್ನ ತಾಯಿಗೆ ಒಬ್ಬ ರಾಕ್ಷಸಿ ಮಗುವಾಗಿ ಹುಟ್ಟವಳು. ಆಕೆ ನಿನ್ನನ್ನೂ, ನಿನ್ನ ಕುಟುಂಬವನ್ನೂ ನುಂಗಿ, ಮನೆಯನ್ನು ನೆಲಸಮ ಮಾಡುವಳು. ಆದ್ದರಿಂದ ನೀನು ಕೂಡಲೇ ಭೂಲೋಕದ ತುದಿಯಲ್ಲಿರುವ ಹೂವಿನ ಕೋಟೆಗೆ ಹೊರಟೆಯೆಂದರೆ ತಪ್ಪಿಸಿಕೊಳ್ಳುವೆ" ಎಂದಿತು.

ಇದನ್ನು ಕೇಳಿದ ಒಡನೆ ಬುದ್ಧಿಸಾಗರನು ಪಂಚಕಲ್ಯಾಣಿಯನ್ನು ವೇಗವಾಗಿ ಓಡಿಸಿದನು. ಸ್ವಲ್ಪ ದೂರದಲ್ಲಿ ಆತನಿಗೆ ಒಂದು ಮೈದಾನ ಪ್ರದೇಶ ಕಾಣಿಸಿತು. ಅಲ್ಲಿ ಮುದುಕಿಯರಿಬ್ಬರು ಕುಳಿತುಕೊಂಡು ಏನೋ ಹೊಲಿಯುತ್ತಿರುವುದು ಕಾಣಿಸಿತು. ದಾರಕಿತ್ತುಬಂದಲ್ಲಿ ಹೊಸ ದಾರ ತೆಗೆದುಕೊಂಡು, ಸೂಜಿ ಮುರಿದುಹೋದಲ್ಲಿ ಹೊಸ ಸೂಜಿ ತೆಗೆದುಕೊಂಡು ಅವರು ಹಾಗೇ ಹೊಲಿಯುತ್ತಲೇ ಇದ್ದರು.

"ಅಜ್ಜಿಯರೇ, ಇದೇ ಏನು ಭೂಲೋಕದ ಕೊನೆ, ಹೇಳಿ? ನನ್ನ ರಾಕ್ಷಸಿ ತಂಗಿ ಹುಡುಕುತ್ತಾ ಬಂದು ನನ್ನನ್ನು ಕಬಳಿಸುವಳು. ಆದ್ದರಿಂದ ನಾನು ನಿಮ್ಮೊಂದಿಗೆ ಇಲ್ಲೇ ಇರುವೆನು" ಎಂದ ರಾಜಕುಮಾರ.

"ಮಗೂ, ಭೂಲೋಕಕ್ಕೆ ಕೊನೆಯಿದಲ್ಲ. ಈ ದಾರವೆಲ್ಲ ಮುಗಿದು, ಸೂಜಿಗಳೆಲ್ಲವೂ ಮುರಿದ ಕೂಡಲೇ ನಾವು ಸಾಯುವೆವು. ಆಗ ನಿನ್ನ ತಂಗಿ ಬಂದರೆ ನೀನೆಲ್ಲಿಗೆ ಹೋಗುತ್ತೀಯೆ? ನಮ್ಮ ಹತ್ತಿರವಿರುವುದು ನಿನಗೆ ಕ್ಷೇಮಕರವಲ್ಲ" ಎಂದು ಅವರಿಬ್ಬರೂ ಆತನಿಗೆ ಹೇಳಿದರು.

ತನ್ನ ಬದುಕು ಏಕಾಕಿ ಆದುದಕ್ಕೆ ವ್ಯಸನಪಡುತ್ತಾ ಬುದ್ಧಿಸಾಗರನು ಮತ್ತೆ ದೌಡಾ

ಕೆ. ಲಿಂಗಣ್ಣ, ಬಳ್ಳಾರಿ.



ಯಿಸಿ ಒಂದು ಅಡವಿಯನ್ನು ಸೇರಿದನು. ಅಲ್ಲಿ ಮರಕೀಳನು ದೊಡ್ಡ ದೊಡ್ಡ ವೃಕ್ಷ ಗಳನ್ನು ಕಿತ್ತು ಬಿಸಾಡುತ್ತಿದ್ದರೆ ಅವು ಛಳ ಛಳನೆಂದು ಶಬ್ದ ಮಾಡುತ್ತಿದ್ದುವು. ರಾಜ ಕುಮಾರನು "ಅಯ್ಯಾ, ಇದೇ ಏನು ಭೂಲೋಕದ ಕೊನೆ. ಹೇಳು ನನ್ನ ತಂಗಿ ಹುಡುಕುತ್ತಾ ಬಂದು ನನ್ನನ್ನು ಕಬಳಿಸು ವಳು. ಆದರಿಂದ ನಿನ್ನೊಂದಿಗೆ ಇಲ್ಲೇ ಇರುವೆನು" ಎಂದನು.

"ಅಪ್ಪಾ, ಭೂಲೋಕಕ್ಕೆ ಇದಲ್ಲ ಕೊನೆ. ಇನ್ನು ಕೆಲವೇ ಮರಗಳಿವೆ. ಅದು ಕೀಳು ವುದು ಮುಗಿಯಿತೆಂದರೆ ನನ್ನ ಆಯುಷ್ಯವು ಮುಗಿಯುವುದು. ಆಗ ನಿನ್ನ ತಂಗಿ ಕಬಳಿ ಸಲು ಬಂದರೆ ನೀನೆಲ್ಲಿಗೆ ಹೋಗುವೆ? ನನ್ನ ಹತ್ತಿರವಿರುವುದು ನಿನಗೆ ಸರ್ವಥಾ ಒಳ್ಳೆಯ ದಲ್ಲ" ಎಂದ ಮರಕೀಳ.

ಏಕಾಕಿ ಬದುಕಾದುದಕ್ಕೆ ಅಳುತ್ತಾ ಬುದ್ಧಿ ಸಾಗರನು ಮತ್ತೆ ಕುದುರೆಯನ್ನು ಓಡಿಸಿದ. ಈ ಸಾರಿ ಒಂದು ಬೆಟ್ಟಪ್ರದೇಶ ಕಾಣಿಸಿತು. ಅಲ್ಲಿ ಗಿರಿವರ್ಧನನು ಬೆಟ್ಟಗಳನ್ನು ಎತ್ತಿ ಚೆಂಡಿನಂತೆ ಎಸೆಯುತ್ತಿದ್ದನು. ಅವು ಮೇಲಿ ನಿಂದ ಕೆಳಕ್ಕೆ ಬಿದ್ದು ಪುಡಿಪುಡಿಯಾಗುತ್ತಾ ಇದ್ದುವು.

ಗಿರಿವರ್ಧನನನ್ನು ನೋಡಿ "ಅಯ್ಯಾ, ಇದೇ ಏನು, ಭೂಲೋಕದ ಕೊನೆ. ಹೇಳು. ನನ್ನ ತಂಗಿ ಹುಡುಕುತ್ತಾ ಬಂದು ನನ್ನನ್ನು ಕಬಳಿಸುವಳು. ಆದ್ದರಿಂದ ಇಲ್ಲಿ ನಿನ್ನೊಡನೆ ನಾನು ಇರುತ್ತೇನೆ" ಎಂದನು. "ಮಗೂ, ಭೂಲೋಕಕ್ಕೆ ಇದಲ್ಲ ಕೊನೆ. ಅಲ್ಲಿ ನೋಡು. ಆ ಕೆಲ ಪರ್ವತಗಳನ್ನು ಪುಡಿ ಮಾಡಿದ ಕೂಡಲೇ ನನ್ನ ಜೀವವು ಅಂತ್ಯವಾಗುವುದು. ಆಗ ಹಠಾತ್ತಾಗಿ ನಿನ್ನ ತಂಗಿ ಕಬಳಿಸಲು ಬಂದರೆ ನೀನೇನು ಮಾಡುವೆ, ಎಲ್ಲಿಗೆ ಹೋಗು ತ್ತೀಯೆ? ನನ್ನ ಹತ್ತಿರವಿರುವುದು ನಿನಗೆ ಕ್ಷೇಮವಲ್ಲ" ಎಂದ ಆತ.

ತನ್ನ ಬದುಕು ಏಕಾಕಿ ಆದುದಕ್ಕೆ ಅತ್ತು ಕರೆದು ಬುದ್ಧಿಸಾಗರನು ಮತ್ತೆ ಕುದುರೆ ಯನ್ನು ನಾಗಾಲೋಟದಿಂದ ಓಡಿಸಿದನು.

ಹೀಗೇ ಹೋಗುತ್ತಿರುವಲ್ಲಿ ಬುದ್ಧಿಸಾಗರ ನಿಗೆ ಮೇಘಗಳಿಂದ ನೇತಾಡುತ್ತಿರುವ ಒಂದು ಹೂವ್ವಿನ ಮಾಳಿಗೆ ಕಾಣಿಸಿತು. ತಪ್ಪದೆ

ಅದೇ ಭೂಲೋಕದ ಕೊನೆಯಿರಬಹು ದೆಂದು ಆತನು ನಿಶ್ಚಯಿಸಿದನು. ತೆರೆದಿದ್ದ ಬಾಗಿಲಿಂದ ಪಂಚಕಲ್ಯಾಣಿ ನೆಟ್ಟಗೆ ಕೋಟೆ ಯೊಳಗೆ ಹೋಗಿ ತೋಟದಲ್ಲಿ ನಿಂತು ಬಿಟ್ಟಿತು.

ಕೋಟೆಯಿಂದ ಒಬ್ಬ ಸುಂದರಿ ಇಳಿದು ಬಂದು, ರಾಜಕುಮಾರನ ಕೈ ಹಿಡಿದು ಕೊಂಡು ಒಳಗೆ ಕರೆದುಕೊಂಡು ಹೋದಳು. "ಯುವಕನೇ, ನೀನು ಹುಡುಕಿಕೊಂಡು ಬಂದ ಭೂಲೋಕದ ಕೊನೆ ಇದೇಯೇ! ಇಷ್ಟು ದಿನಗಳಿಗ ನೀನು ಇಲ್ಲಿಗೆ ಬಂದಿದ್ದಕ್ಕೆ ನನಗೆ ಬಹಳ ಸಂತೋಷವಾಗಿದೆ. ಇಷ್ಟು ದಿನವೂ ಏಕಾಂತವಾಗಿದ್ದುದರಿಂದ ನನಗೆ ಬೇಸರವಾಗುತ್ತಿತ್ತು. ನನ್ನ ಹೆಸರು ಛಾಯಾ ಸುಂದರಿ. ನನ್ನೊಂದಿಗೆ ಆಡಿಕೊಳ್ಳುತ್ತಾ ಇರಬೇಕು" ಎಂದು ಆಕೆ ಬುದ್ಧಿಸಾಗರನನ್ನು ಬಲವಂತ ಮಾಡಿದಳು.

ಛಾಯಾಸುಂದರಿಯ ಇಷ್ಟದ ಪ್ರಕಾರ ಆತನು ಹೂವಿನ ಕೋಟೆಯಲ್ಲೇ ಆಡುತ್ತಾ ಪಾಡುತ್ತಾ ಕಾಲ ಕಳೆಯುತ್ತಿದ್ದನು. ಆತನು ತೋಟದಲ್ಲೆಲ್ಲಾ ತಿರುಗಾಡುತ್ತಿದ್ದನು. ಸುತ್ತ ಮುತ್ತಲಿದ್ದ ಬೆಟ್ಟಗಳನ್ನೇರುತ್ತಿದ್ದನು. ಆದರೂ ಛಾಯಾಸುಂದರಿ ಆತನನ್ನು ಎಂದೂ ಅಡ್ಡಿ ಮಾಡಲಿಲ್ಲ.

ಒಂದು ದಿನ ಬುದ್ಧಿಸಾಗರನು ಕೋಟೆಯ ಮೇಲೆ ಹತ್ತಿ ಸುತ್ತಲೂ ನೋಡಿದನು. ಒಂದು ದಿಕ್ಕಿನಲ್ಲಿ ತನ್ನ ಊರು, ಆ ಊರಿನಲ್ಲಿ



ಛಾವಣಿಯಿಲ್ಲದ ಅರಮನೆ, ಬಿರುಕು ಬಿಟ್ಟ ಗೋಡೆಗಳೂ ಕಾಣಿಸಿದುವು. ಇವೆಲ್ಲವೂ ತನ್ನ ರಾಕ್ಷಸಿ ತಂಗಿಯು ಮಾಡಿದ ಕೆಲಸವಿರ ಬೇಕೆಂದು ಆತನಿಗೆ ಜ್ಞಾಪಕಕ್ಕೆ ಬಂದು ಅಳಲು ಮೊದಲುಮಾಡಿದನು.

ಆತನ ಕಣ್ಣುಗಳು ಕೆಂಪಗಾಗಿರುವುದನ್ನು ನೋಡಿ ಕಾರಣವೇನೆಂದು ಛಾಯಾಸುಂದರಿ ಕೇಳಿದಳು.

"ನನ್ನ ಮನಸ್ಸು ನೆಮ್ಮದಿಯಾಗಿಲ್ಲ. ನನಗೆ ತಂಗಿಯೊಬ್ಬಳು ಜನಿಸಿ, ನಮ್ಮ ಕುಟುಂಬವನ್ನೇ ನಾಶ ಮಾಡುವಳೆಂದು ಬೆಕ್ಕಿನ ಮರಿ ಹೇಳಿತು ನಾನೀಗಲೇ ಊರಿಗೆ ಹೋಗಿ ನನ್ನ ತಂದೆತಾಯಿಗಳನ್ನು ಬದುಕಿಸ ಬಲ್ಲನೇನೋ ನೋಡಿಬರುವೆನು." ಎಂದು



ರಾಜಕುಮಾರನು ಮುಚ್ಚುಮರೆಯಿಲ್ಲದೆ ತನ್ನ ನೋವನ್ನು ಹೇಳಿದನು.

ಛಾಯಾಸುಂದರಿ ಎಷ್ಟು ಬೇಡವೆಂದರೂ ಕೇಳದೆ ಆತನು ಹಟ ಹಿಡಿದು ತನ್ನ ಊರಿಗೆ ಹೊರಡಲನುವಾದನು. ಆಗ ಛಾಯಾ ಸುಂದರಿ ಆತನಿಗೆ ಒಂದು ಮಾಯಾ ಕುಂಚ, ಒಂದು ಮಾಯಾ ಬಾಚಣಿಗೆ, ಎರಡು ಎಳಚಿ ಹಣ್ಣುಗಳನ್ನೂ ಮತ್ತು ಅವುಗಳನ್ನು ಉಪ ಯೋಗಿಸುವ ವಿಧಾನವನ್ನೂ ಹೇಳಿಕಳುಹಿ ಸಿದಳು.

ಹೂವ್ವಿನ ಕೋಟೆಯಿಂದ ಮರಳಿ ಬರು ವಾಗ ರಾಜಕುಮಾರನಿಗೆ ಗಿರಿವರ್ಧನನು ಮೊದಲು ಕಾಣಿಸಿದನು. ಆತನು ಪುಡಿಮಾ ಡಲು ಇನ್ನು ಒಂದೇ ಒಂದು ಬೆಟ್ಟವಿತ್ತು. ಅದು ಮುಗಿದರೆ ಆತನ ಆಯುಸ್ಸು ಮುಗಿ ದಂತೆಯೇ. ಆದ್ದರಿಂದ ಆತನು ವ್ಯಸನ ಪಡುತ್ತಿದ್ದನು. ಬುದ್ಧಿಸಾಗರನು ಆತನಿಗೆ ವ್ಯಸನಪಡಬೇಡವೆಂದು ಹೇಳಿ ತನ್ನ ಹತ್ತಿರ ವಿದ್ದ ಮಾಯಾ ಕುಂಚವನ್ನು ಎಸೆದ ಒಡನೇ ಭೂಮಿಯು ಪಟಪಟನೆಂದು ಸೀಳಿ ಅದರಿಂದ ಎಷ್ಟೋ ಕೋಟಿ ಪರ್ವತಗಳು ಉದಯಿಸಿ ದುವು.

ಅವುಗಳನ್ನು ನೋಡಿ ಗಿರಿವರ್ಧನನಿಗೆ ಬಹಳ ಸಂತೋಷವಾಯಿತು. "ಮಗೂ, ಈ ಪರ್ವತಗಳು ಒಂದು ಸಾವಿರ ವರ್ಷಗಳ ವರೆವಿಗೂ ಸಾಕಾಗುವುದು. ನನಗೆ ಮತ್ತೆ ಆಯುವನ್ನಿತ್ತ ನಿನಗೆ ಒಳ್ಳೆಯದಾಗುತ್ತದೆ" ಎಂದು ರಾಜಕುಮಾರನನ್ನು ಆಶೀರ್ವದಿಸಿ ಕಳುಹಿಸಿದನು.

ಎರಡನೇ ಸ್ಥಳದಲ್ಲಿ ಮರಕೀಳನು ಎದು ರಾದ. ಆತನು ಕೀಳಬೇಕಾದ ಮರಗಳು ಎರಡು ಮಾತ್ರವಿದ್ದುವು. ಅವು ಮುಗಿದ ಮೇಲೆ ಸಾಯುವೆನೆಂದು ಅವನೂ ಪೆಚ್ಚು ಮುಖ ಹಾಕಿಕೊಂಡಿದ್ದನು. "ನಿನಗೇನೂ ಭಯವಿಲ್ಲ" ಎಂದು ಹೇಳಿ ಬುದ್ಧಿಸಾಗರನು ತನ್ನ ಹತ್ತಿರವಿದ್ದ ಮಾಯಾ ಬಾಚಣಿಗೆಯನ್ನು ಎಸೆಯುವಲ್ಲಿ, ಅಲ್ಲಿ ಒಂದು ಮಹಾ ಅರಣ್ಯವು ಸಿದ್ಧವಾಯಿತು. ಅದನ್ನು ಕಂಡು ಮರಕೀಳ ನಿಗೆ ಸಂತೋಷವು ಉಕ್ಕಿ ಬಂತು. "ಮಗೂ ಈ ಮರಗಳು ಒಂದು ಸಾವಿರ ವರ್ಷಗಳ ವರೆವಿಗೂ ಸಾಕಾಗುವುದು. ನನಗೆ ಜೀವ

ದಾನ ಕೊಟ್ಟಿದ್ದಕ್ಕೆ ನಿನಗೆ ಮೇಲಾಗುವುದು" ಎಂದು ಆಶೀರ್ವಾದ ಮಾಡಿದನು.

ತರುವಾಯ ಮೈದಾನದಲ್ಲಿ ಮುದುಕಿಯರಿಬ್ಬರು ಕಾಣಿಸಿದರು. ಸೂಜಿ, ಮತ್ತು ದಾರಗಳು ಇನ್ನೇನು ಮುಗಿಯುತ್ತಿದ್ದುದರಿಂದ ಹೇಗಿದ್ದರೂ ಸಾಯುವೆವೆಂದು ಅವರು ವಿರಕ್ತರಾಗಿದ್ದರು. "ನಿಮಗೇನು ಭಯವಿಲ್ಲ." ಎಂದು ಬುದ್ಧಿಸಾಗರನು ತಲಾ ಒಂದೊಂದು ಎಳಚಿ ಹಣ್ಣುಗಳನ್ನು ಕೊಟ್ಟನು. ಅವನ್ನು ತಿಂದ ಕೂಡಲೇ ಅವರಿಗೆ ಯೌವ್ವನವುಂಟಾಯಿತು. ಅವರು ಬಹು ಸಂತೋಷಪಟ್ಟರು. "ಮಗೂ. ನಿನ್ನ ಪುಣ್ಯವೇ ಅಂತ ನಮಗೆ ಮತ್ತೆ ಸಾವಿರ ವರ್ಷ ಆಯುಸ್ಸು ಕೊಟ್ಟೆ. ನಾವಿಷ್ಟು ಕಾಲದಿಂದ ಕಸೂತಿ ಹಾಕುತ್ತಿದ್ದ ಕೈ ಚೌಕವನ್ನು ನಿನಗೆ ಬಹುಮಾನವಾಗಿ ಕೊಡುತ್ತಿದ್ದೇವೆ. ಸಮಯ ಬಂದಾಗ ಇದನ್ನು ನೆಲದ ಮೇಲೆ ಒಗೆದರೆ ನಿನಗೆ ಬೇಕಾದ ಸಹಾಯ ಸಿಗುವುದು. ಹತ್ತಿರ ಇಟ್ಟುಕೋ" ಎಂದು ಹೇಳಿ ಆಶೀರ್ವಾದ ಮಾಡಿದರು.

ಬುದ್ಧಿಸಾಗರನು ಮನೆ ಸೇರುವ ಹೊತ್ತಿಗೆ ತಾಯಿಯಿಲ್ಲ, ತಂದೆಯಿಲ್ಲ. ಒಂದು ಗೋಡೆಯ ಬಿರುಕಿನಿಂದ ಆತನು ಮನೆಯೊಳಗೆ ಇಣಿಕಿ ನೋಡಿದನು. ಅಣ್ಣ ಯಾವ ಕ್ಷಣದಲ್ಲಿ ಬರುವನೋ ಎಂದು ತಂಗಿ ತನ್ನ ಭಾರಿ ಶರೀರವನ್ನು ಸಣ್ಣದಾಗಿ ಮಾಡಿಕೊಂಡಿದ್ದಳು. ಆಕೆಯನ್ನು ಕಂಡು ಬುದ್ಧಿಸಾಗರನು ಭಯಪಟ್ಟು, ಓಡಿಹೋಗುತ್ತಿರುವಲ್ಲಿ, ನಸುನಗೆ ಬೀರುತ್ತಾ ತಂಗಿ ಹೊರಗೆ ಬಂದು "ಅಣ್ಣಾ, ನಿನಗಾಗಿಯೇ ಎದುರುನೋಡುತ್ತಿದ್ದೆ. ಈ ಕೊಠಡಿಯಲ್ಲಿ ಹಾಯಾಗಿ ಹಾಡಿಕೊಳ್ಳುತ್ತಾ ಕುಳಿತುಕೋ. ಇಷ್ಟರಲ್ಲಿ ನಾನು ಫಲಾಹಾರ ಮಾಡಿ ತರುವೆನು" ಎಂದು ಪ್ರೇಮದಿಂದ ಆಹ್ವಾನಿಸಿದಳು.



ಆತನು ಹಾಗೇ ಕುಳಿತುಕೊಂಡು ಹಾಡಿಕೊಳ್ಳುತ್ತಿರುವಾಗ ಬೆಕ್ಕಿನ ಮರಿ ಮತ್ತೆ ಬಂದು "ರಾಜಕುಮಾರ ನಿನ್ನ ತಂಗಿ ನಿನಗಾಗಿ ಫಲಾಹಾರ ಮಾಡುತ್ತಿರಬಹುದೆಂದು ನೀನು ಯೋಚಿಸಿಕೊಂಡಿರಬಹುದು. ಅದೇನಿಲ್ಲ. ನಿನ್ನನ್ನು ಫಲಾಹಾರ ಮಾಡಲು ಸಿದ್ಧವಾಗುತ್ತಿದ್ದಾಳೆ. ತಕ್ಷಣ ಓಡು" ಎಂದು ಹೇಳಿತು.



ಚಿಕ್ಕಿನ ಮರಿ ಸಲಹೆಯ ಪ್ರಕಾರ ಬುದ್ಧಿ ಸಾಗರ ಪಂಚಕಲ್ಯಾಣಿಯನ್ನು ಹತ್ತಿ ಹೊರಟನು. ಹಾಡು ನಿಂತಂತಾಗಲು, ತಂಗಿ ಕೊಠಡಿಯೊಳಗೆ ಬಂದು ನೋಡಿದಳು. ಅಣ್ಣನು ಕಾಣಿಸಲಿಲ್ಲ. ಅವನ ಜಾಡನ್ನು ಕಂಡುಕೊಂಡು ಗರ್ಜಿಸುತ್ತಾ ಹಿಂಬಾಲಿಸಿದಳು.

ಆಗ ಬುದ್ಧಿಸಾಗರನು ಮುದುಕಿಯರು ಕೊಟ್ಟ ಕೈ ಚೌಕವನ್ನು ಕೆಳಗೆಸೆದನು. ಅಲ್ಲಿ ಒಂದು ಆಳವಾದ ಹಳ್ಳವೇರ್ಪಟ್ಟಿತು. ಆಕೆ ಅದನ್ನು ದಾಟಿ ಬರುವಷ್ಟರಲ್ಲಿ ಆತನು ಅಡವಿಯನ್ನು ಸೇರಿಕೊಂಡನು. ಎವೆಯಿಕ್ಕುವಷ್ಟರಲ್ಲಿ ಆಕೆ ಅಡವಿಗೆ ಬಂದುಬಿಟ್ಟಳು. ಇಷ್ಟರಲ್ಲಿ ಮರಕೀಳನು ದೊಡ್ಡ ದೊಡ್ಡ ಮರಗಳನ್ನು ಕಿತ್ತು ಅಡ್ಡವಾಗಿ ಹಾಕಿದ. ಅವುಗಳನ್ನು ತಪ್ಪಿಸಿಕೊಂಡು ಆಕೆ ಮತ್ತೆ ಹೊರಡುವಷ್ಟರಲ್ಲಿ ಬುದ್ಧಿಸಾಗರ ಬೆಟ್ಟಗಳನ್ನು ಸೇರಿಕೊಂಡನು. ಆಕೆ ಆತನನ್ನು ಹಿಂಬಾಲಿಸಿಕೊಂಡು ಬರುತ್ತಲೇ ಇದ್ದಳು.

ಅಲ್ಲಿ ಗಿರಿವರ್ಧನನೇನು ಸುಮ್ಮನೆ ಇದ್ದನೇ? ಅಗಾಧವಾದ ಕೆಲವು ಪರ್ವತಗಳನ್ನು ಎತ್ತಿ ಅಡ್ಡ ಹಾಕಿದ. ಅವುಗಳನ್ನು ತಪ್ಪಿಸಿಕೊಂಡು ಆಕೆ ಮತ್ತೆ ಬರುವಷ್ಟರಲ್ಲಿ ಬುದ್ಧಿಸಾಗರ ಹೂವ್ವಿನ ಕೋಟೆಯನ್ನು ಸೇರಿಕೊಂಡನು. "ಈಗ ಹೇಗೆ ತಪ್ಪಿಸಿಕೊಳ್ಳುವೆಯೋ ನೋಡೋಣ" ಎಂದು ಬೊಬ್ಬಿಡುತ್ತಾ ಆಕೆ ಹಿಂಬಾಲಿಸುತ್ತಲೇ ಇದ್ದಳು.

ಮೇಘಗಳಿಂದ ಇದೆಲ್ಲವನ್ನೂ ನೋಡುತ್ತಿದ್ದ ಛಾಯಾಸುಂದರಿ ಕೋಟೆ ಬಾಗಿಲನ್ನು ತೆಗೆದೇ ಇದ್ದಳು. ಪಂಚಕಲ್ಯಾಣಿ ಮತ್ತೆ ಬಾಗಿಲಿನಿಂದ ನೆಟ್ಟಗೆ ತೋಟದೊಳಕ್ಕೆ ಹೊಕ್ಕು ಅಲ್ಲಿ ನಿಂತಿತು.

ರಾಕ್ಷಸಿ ತಂಗಿ ಘರ್ಜಿಸುತ್ತಾ ಬಂದು "ನನ್ನ ಅಣ್ಣನನ್ನು ನನಗೆ ಕೊಟ್ಟುಬಿಡು" ಎಂದು ಛಾಯಾಸುಂದರಿಯನ್ನು ಕೇಳಿದಳು. "ನಾನು ಕೊಡುವುದಿಲ್ಲ ಹೋಗು ಇಲ್ಲಿಂದ" ಎಂದಳು ಛಾಯಾಸುಂದರಿ.

ಜಗಳ ಆಡಿದರೆ ಜಯವಿಲ್ಲವೆಂದೂ, ಯುಕ್ತಿಯೇ ಯುಕ್ತವೆಂದು ಅರಿತಳು ರಾಕ್ಷಸಿ ತಂಗಿ. ತನ್ನ ಶರೀರವನ್ನು ಚಿಕ್ಕದಾಗಿ ಮಾಡಿ

ಕೊಂಡು, ಚಿಕ್ಕ ಬಾಲಿಕೆಯ ರೂಪದಲ್ಲಿ ಛಾಯಾಸುಂದರಿಯ ಹತ್ತಿರ ಬಂದು ಹೇಳಿದಳು. "ಹೋಗಲಿ, ನಾನೊಂದು ಮಾತು ಹೇಳುವೆನು. ನನ್ನನ್ನೂ ನನ್ನ ಅಣ್ಣನನ್ನೂ ತ್ರಾಸಿನಲ್ಲಿಟ್ಟು ತೂಗು. ಯಾರು ಹೆಚ್ಚು ಭಾರವಿದ್ದರೆ ಅವರು ಗೆದ್ದಂತೆ. ನನಗಿಂತಲೂ ಆತನು ಹೆಚ್ಚು ಭಾರವಾದರೆ ಮರುಮಾತನಾಡದೆ ಹೊರಟುಹೋಗುವೆನು. ಇಲ್ಲದಿದ್ದ ಪಕ್ಷಕ್ಕೆ ಎತ್ತಿಕೊಂಡು ಹೋಗುತ್ತೇನೆ."

ಮಾಯಾವಿಯ ಮಾತುಗಳಿಗೆ ಮುಗುಳುನಗೆ ನಕ್ಕು ಒಪ್ಪಿಕೊಂಡಳು ಛಾಯಾಸುಂದರಿ. ತ್ರಾಸಿನ ತಾಟುಗಳು ಭೂಲೋಕದ ಕೊನೆಗೆ ಆತುಕೊಂಡಿರುವಂತೆ ಛಾಯಾಸುಂದರಿ ಮೇಘಮಂಡಲದಿಂದ ತ್ರಾಸನ್ನು ತೂಗಹಾಕಿದಳು. ಬುದ್ಧಿಸಾಗರನು ಹತ್ತಿದ ತಾಟು ಕೆಳಕ್ಕೆ ಇಳಿಯುತ್ತಿರುವುದನ್ನು ಕಂಡು ರಾಕ್ಷಸಿಯು ಕೋಪದಿಂದ ತನ್ನ ಶರೀರವನ್ನು ಬೆಳೆಸಿ "ಇದೋ ನಾನೇ ಭಾರವಾಗಿದ್ದೇನೆ" ಎಂದು ತ್ರಾಸಿನೊಳಗೆ ದುಮುಕಿದಳು. ಅವಳ ಭಾರವನ್ನು ತಡೆಯಲಾರದೆ ತ್ರಾಸಿನ ತಾಟು ಕಿತ್ತುಹೋಯಿತು. ಆಕೆ ನೆಲದ ಮೇಲೆ ಉರುಳಿದಳು.

ಆ ತಾಟು ಯಾವಾಗ ಕಿತ್ತುಹೋಯಿತೋ, ಬುದ್ಧಿಸಾಗರನ ತ್ರಾಸಿನ ತಾಟು ಮೇಲಕ್ಕೆ ಹಾರಿತು. ಆತನು ತೆರೆದಿದ್ದ ಬಾಗಿಲಿಂದ ಮೇಘಮಂಡಲದಲ್ಲಿದ್ದ ಹೂವ್ವಿನ ಕೋಟೆಯೊಳಗೆ ಹೊರಟುಹೋದ.

ಕೋಪ ತಡೆಯಲಾರದೆ ಹಲ್ಲು ಕಡಿಯುತ್ತಿದ್ದ ರಾಕ್ಷಸಿಯನ್ನು ನೋಡಿ ನಗುತ್ತಾ ಛಾಯಾಸುಂದರಿಯು ಮೆಲ್ಲನೆ ಕಿಟಕಿ ಬಾಗಿಲುಗಳನ್ನು ಮುಚ್ಚಿದಳು.

ಅಂದಿನಿಂದ ರಾಕ್ಷಸಿ ತಂಗಿಯ ತಡೆಯಿಲ್ಲದೆ, ಛಾಯಾಸುಂದರಿ ಬುದ್ಧಿಸಾಗರರು ಕೋಟೆಯಲ್ಲಿ ಆಡಿಕೊಳ್ಳುತ್ತಿರುವರು. ಅವರು ಹಗಲು ಹೊತ್ತಿನಲ್ಲಿ ನಕ್ಷತ್ರಗಳನ್ನು ಹಿಡಿದುಕೊಂಡುಹೋಗಿ ಅವರೊಂದಿಗೆ ಆಡುವರು. ಅದರಿಂದಲೇ ನಮಗೆ ಹಗಲು ಹೊತ್ತಿನಲ್ಲಿ ನಕ್ಷತ್ರಗಳು ಕಾಣಿಸುವುದಿಲ್ಲ. ರಾತ್ರಿಯ ಹೊತ್ತಿನಲ್ಲಿ ಮಾತ್ರ ಅವರು ನಮಗಾಗಿ ಆಕಾಶದಲ್ಲಿ ಬಿಡುವರು.






ಮೇಲಿರುವ ಒಂಭತ್ತು ಚಿತ್ರಗಳೂ ಒಂದೇ ರೀತಿ ಕಾಣಿಸುತ್ತವೆ. ಆದರೆ ಸೂಕ್ಷ್ಮವಾಗಿ ದೃಷ್ಟಿಸಿ ನೋಡಿದರೆ ವ್ಯತ್ಯಾಸ ಕಾಣುತ್ತದೆ. ಎರಡು ಮಾತ್ರ ಒಂದೇ ವಿಧ. ಆ ಎರಡು ಯಾವುವೆಂದು ಕಂಡುಹಿಡಿಯುವಿರಾ?




ಈ ಮಧ್ಯೆ ಜಪಾನಿನ ಅನೇಕ ಮಕ್ಕಳು ನಮ್ಮ ಭಾರತದ ಮುಖ್ಯ ಮಂತ್ರಿ ಪಂಡಿತ ನೆಹ್ರೂರವರಿಗೆ ಅನೇಕ ಕಾಗದಗಳನ್ನು ಬರೆದರೆಂದೂ, ಆ ಮಕ್ಕಳ ಕೋರಿಕೆಯನ್ನು ಈಡೇರಿಸಲು ನೆಹರೂರವರು ಮೈಸೂರಿನ। ಒಂದು ಆನೆಯನ್ನು ಕಳಿಸುವರೆಂದೂ ವರ್ತಮಾನವು ನಿಮ್ಮಲ್ಲಿ ಅನೇಕರಿಗೆ ತಿಳಿದಿರಬಹುದು. ಶ್ರೀ ಹಿಮಾಂಶು ನಿಯೋಗಿ ಎಂಬ ಕಲ್ಕತ್ತೆಯ ವರ್ತಕರು ಜಪಾನಿಗೆ ವ್ಯಾಪಾರ ವಿಷಯವಾಗಿ ಹೋಗಿದ್ದಾಗ ಆ ಮಕ್ಕಳೆಲ್ಲರೂ ಆನೆ ಬೇಕೆಂದು ಬರೆದು ತಮ್ಮ ತಮ್ಮ ಕಾಗದಗಳನ್ನು ಅವರಿಗೆ ಒಪ್ಪಿಸಿ ಭಾರತದ ಮುಖ್ಯ ಮಂತ್ರಿಗೆ ತಲುಪಿಸಲು ಕೇಳಿಕೊಂಡರು. ಅವರಿಗೆ ಈ ರೀತಿ ೮೧೫ ಕಾಗದಗಳು ಬಂದುವಂತೆ.

ಆ ಕಾಗದಗಳಲ್ಲಿ ಕೆಲವನ್ನೂ ಅವುಗಳ ವಿವರಗಳನ್ನೂ ಮೇಲೆ ನೋಡಿರಿ.




# ಮಕ್ಕಳ ಬೆಳವಣಿಗೆ

## ಸ್ನಾನ

ಪ್ರತಿದಿನ ಬೆಳಗ್ಗೆ ಸಾಯಂಕಾಲ ಎರಡು ವೇಳೆಯೂ ಸ್ನಾನ ಮಾಡುವುದು ಆರೋಗ್ಯಕರ. ಹೊತ್ತಿಗೆ ಮುಂಚೆ ಸ್ನಾನ ಮಾಡುವುದು ಬಹಳ ಮುಖ್ಯ. ಸ್ನಾನವೆಂದರೆ ಸುಮ್ಮನೆ ನೀರು ಮೈಮೇಲೆ ಸುರಿದುಕೊಳ್ಳುವುದಲ್ಲ. ಮೈಕೊಳೆ ಪೂರ್ತಿಯಾಗಿ ಕಳೆಯುವುದು ಅದರ ಗುರಿ.

ಅಲ್ಲದೆ ಎತ್ತರದಿಂದ ತಣ್ಣೀರನ್ನು ದೇಹದ ಮೇಲೆ ಸುರಿದುಕೊಂಡು ಸ್ನಾನ ಮಾಡಿದರೆ, ದೇಹದಲ್ಲಿ ವಿದ್ಯುಚ್ಛಕ್ತಿ ಹುಟ್ಟಿ ನರಗಳಲ್ಲಿ ಶಕ್ತಿ ಮತ್ತು ಉತ್ಸಾಹ ಉಂಟುಮಾಡುವುದು. ಸಣ್ಣ ಜಲಪಾತಗಳ ಕೆಳಗೆ ಈ ಅನುಕೂಲವುಂಟು.

ದೇಹದಲ್ಲಿ ಖಾಯಿಲೆಯುಳ್ಳವರು ಮಾತ್ರ ಬಿಸಿ ನೀರು ಸ್ನಾನ ಮಾಡಬೇಕೇ ಹೊರತು ಮತ್ತೆಲ್ಲರಿಗೂ ತಣ್ಣೀರೇ ಪ್ರಶಸ್ತ. ತಣ್ಣೀರು ಸ್ನಾನದಿಂದ ಶೀತವಾಗುತ್ತದೆಂದು ಅನೇಕ ಜನರು ಭಯಪಡುತ್ತಾರೆ. ಅದು ನಿಜವಲ್ಲ. ಮಾಡುವ ರೀತಿಯಲ್ಲಿ ಮಾಡಿದರೆ ಅದರಷ್ಟು ಆನಂದದಾಯಕ ಬೇರೆ ಇಲ್ಲ. ಕುಂಕುಡಕಾಯಿ, ಸೀಗೆಕಾಯಿಗಳಿಂದ ಮೈ ತಿಕ್ಕಿ ಸ್ನಾನ ಮಾಡುವುದರಿಂದ ಚರ್ಮ ರಂಧ್ರದ ಕೊಳೆ ಹೋಗಿ ಶುಭ್ರವಾಗುತ್ತದೆ. ಇದನ್ನು ತಿಳಿದವರು ಕೂಡ ಸಾಬೂನು ಉಪಯೋಗಿಸುವುದು ಮಾತ್ರ ನಾಗರೀಕತೆಯೆಂದು ಅದನ್ನು ಉಪಯೋಗಿಸುತ್ತಾರೆ. ಅದು ನಮ್ಮ ದುರದೃಷ್ಟ. ಸ್ನಾನವಾದ ಒಡನೆ ಶುಭ್ರವಾದ ಬಟ್ಟೆಯಿಂದ ಮೈಯ್ಯನ್ನು ಚೆನ್ನಾಗಿ ತಿಕ್ಕಿ ಒರೆಸಬೇಕು. ಹಾಗೆ ಮಾಡುವುದರಿಂದ ನಮ್ಮ ಚರ್ಮದ ಮೇಲಿನ ಹಳೆಯ ಸತ್ತ ಕಣಗಳು ಹೋಗಿ ಹೊಸ ಕಾಂತಿಯು ಚರ್ಮಕ್ಕೆ ಬರುತ್ತದೆ. ಹಾಗೂ ರಕ್ತವು ಚೆನ್ನಾಗಿ ಕಣಕಣಗಳಲ್ಲಿಯೂ ಪ್ರವಹಿಸುವುದರಿಂದ ಚರ್ಮ ರೋಗಗಳು ಬರುವುದಿಲ್ಲ. ಶುಭ್ರತೆಯೇ ಸ್ನಾನದ ಗುರಿ.

---

ನಿಮ್ಮ ಅಕ್ಕ.

---

## ಕಳ್ಳನ ಪತ್ತೆ



ಈ ದೊಡ್ಡ ಚದರದಲ್ಲಿ ಅನೇಕ ಚಿಕ್ಕ ಚಿಕ್ಕ ಮನೆಗಳಿವೆ. ಕೆಲವು ಮನೆಗಳ ಮಧ್ಯ ಚುಕ್ಕಿಗಳು ಕಾಣಿಸುತ್ತಿವೆ. ಎಷ್ಟೋ ಮನೆಗಳಲ್ಲಿ ಚುಕ್ಕಿ ಇಲ್ಲ. ಚುಕ್ಕಿಗಳುಳ್ಳ ಮನೆಗಳನ್ನು ಮಾತ್ರ ಬಣ್ಣದ ಪೆನ್ಸಿಲಿನಿಂದ ಬಣ್ಣ ತುಂಬಿರಿ. ಆಗ ಮರೆಸಿಕೊಂಡಿರುವ ಕಳ್ಳ ತಾನೇ ಸಿಕ್ಕುತ್ತಾನೆ.

| | | | | | | |
|---|---|---|---|---|---|---|
| 1 ರಾ | 2 ಮ | | | | 3 ಕ | ಥೆ |
| | 4 ದ | 5 ನ | | 6 ಕೋ | ರೆ | |
| 7 ಮ | | 8 ವ | 9 ಸ | ತಿ | | 10 ದ |
| 11 ರ | ಣ | | ಹಾ | | 12 ಮೋ | ಸ |
| ಳು | | 13 ಶ | ಯ | 14 ನ | | ರ |
| | 15 ಕಾ | ಶಿ | | 16 ಯ | 17 ಶ | |
| 18 ಹ | ಲ | | | | 19 ರ | ವಿ |

ಳಳನೆಯ ಪುಟದ ಚಿತ್ರದೊಗಟಿಗೆ
ಉತ್ತರ.
೪, ೯ನೆಯ ನಂಬರಿನ
ಬೊಂಬೆಗಳು ಒಂದು ವಿಧ.

### ಒಗಟುಗಳಿಗೆ ಉತ್ತರ

೧. ಹಾವು, ೨. ವಿದ್ಯುಚ್ಛಕ್ತಿ, ೩. ಮಲ್ಲಿಗೆ ಹೂ, ೪. ನಾಲಗೆ, ೫. ಬಾಳೆಹಣ್ಣು, ೬. ತೆಂಗಿನಕಾಯಿ, ೭. ನೀರು, ೮. ಸೂರ್ಯ, ಚಂದ್ರ.

# ಇಂದ್ರಜಾಲ

ಮಕ್ಕಳಿರಾ! ನಿಮಗೊಂದು ಸಂತೋಷ ವಿಷಯ. ಅದೇನೆನ್ನುವಿರೋ! ಹೇಳುತ್ತೇನೆ. ಪಿ. ಸಿ. ಸರ್ಕಾರ್ ಎಂಬ ಹೆಸರು ನೀವು ಕೇಳಿರಬಹುದು. ಅವರು ಭಾರತೀಯರು. ಇಂದ್ರಜಾಲ ವಿದ್ಯಾನಿಪುಣರು. ಪ್ರಪಂಚ ದಲ್ಲೆಲ್ಲಾ ಕೀರ್ತಿಪಡೆದ ಐಂದ್ರಜಾಲಿಕರಲ್ಲಿ ಇವರೂ ಒಬ್ಬರು.

ಇವರು ಪ್ರಪಂಚವನ್ನೆಲ್ಲಾ ಹಲವು ಬಾರಿಸುತ್ತಿ ತಮ್ಮ ಅಮೋಘ ವಿದ್ಯಾನಿಪುಣತೆಯನ್ನು ಪ್ರದರ್ಶಿಸಿ, ಲಕ್ಷಾಂತರ ಪ್ರಜೆಗಳನ್ನು ಮುಗ್ಧರನ್ನಾಗಿಮಾಡಿದ್ದಾರೆ. ಗಾರುಡಿ, ಯಕ್ಷಿಣಿ, ಮೆಸ್ಮರಿಸಂ ಮುಂತಾದ ವಿಷಯಗಳ ಮೇಲೆ ಪುಸ್ತಕಗಳನ್ನು ಬರೆದಿದ್ದಾರೆ. ಆ ಪುಸ್ತಕಗಳನ್ನು ಪರದೇಶದವರೆಲ್ಲಾ ತಮ್ಮ ತಮ್ಮ ಭಾಷೆಗಳಿಗೆ ತರ್ಜುಮೆ ಮಾಡಿ ಅದರ ಲಾಭ ಪಡೆದಿದ್ದಾರೆ. ಅಮೆರಿಕದ ಪ್ರಸಿದ್ಧ ಪತ್ರಿಕೆಗಳೆಲ್ಲಾ ಶ್ರೀ ಸರ್ಕಾರರನ್ನು ಶ್ಲಾಘಿಸಿ, ಅಭಿಮಾನದಿಂದ ಮುಖಪುಟಗಳ ಮೇಲೆ ಚಿತ್ರದೊಡನೆ ವಿವರಿಸಿ ಪ್ರಕಟಿಸಿದ್ದಾರೆ. ಅತ್ಯಂತ ಹಿರಿಯ ಸಾಹಿತಿ ಮತ್ತು ವಿಜ್ಞಾನಿಗಳಿಗೆ ನೊಬೆಲ್ ಬಹುಮಾನ ಹೇಗೆ ಕೊಡಲ್ಪಡುವುದೋ ಹಾಗೆಯೇ, ಅಮೆರಿಕದ ನ್ಯೂಯಾರ್ಕಿನಲ್ಲಿ ಪ್ರಕಟವಾಗುವ "ಸ್ಫಿಂಕ್ಸ್" ಪತ್ರಿಕೆಯವರು ಪ್ರತಿ ವರ್ಷವೂ ಪ್ರಖ್ಯಾತಿ ಗಳಿಸಿದ ಗಾರುಡಿ ವಿದ್ಯಾನಿಪುಣರಿಗೆ ಬಹುಮಾನ ಕೊಡುತ್ತಾರೆ. ಆ ಸ್ಫಿಂಕ್ಸ್ ಬಹುಮಾನವನ್ನು ಎರಡು ಬಾರಿ ಗೆದ್ದ ಧೀರರು ನಮ್ಮ ಪಿ. ಸಿ. ಸರ್ಕಾರರೊಬ್ಬರೇ. ಅವರ ಗಟ್ಟಿಗತನಕ್ಕೆ ಈ ನಿದರ್ಶನವೇ ಸಾಕು. ಭಾರತದ ಖ್ಯಾತಿವೆತ್ತ ಐಂದ್ರಜಾಲಿಕ ರತ್ನಕ್ಕಾಗಿ ನಾವು ಹೆಮ್ಮೆಪಡಬೇಕು. ಇಂತಹ ಮಹಾವ್ಯಕ್ತಿಯು ಪ್ರತ್ಯೇಕವಾಗಿ ಚಂದಮಾಮನ ಓದುಗರಿಗೆ ತಮ್ಮ ಗಾರುಡಿವಿದ್ಯಾ ವಿಚಿತ್ರಗಳನ್ನು ಚಿತ್ರಗಳೊಡನೆ ಪ್ರತಿ ತಿಂಗಳೂ ಕಳುಹಿಸಿ ಸಂತೋಷಪಡಿಸುತ್ತೇನೆಂದಿರುವರು.



ಶ್ರೀ ಸರ್ಕಾರರ ಗಾರುಡಿ ವೈಚಿತ್ರ್ಯಗಳು ಚಿತ್ರಗಳ ಸಹ ಇದೇ ಶೀರ್ಷಿಕೆಯ ಕೆಳಗೆ ಮುಂದಿನ ಸಂಚಿಕೆಯಿಂದ ಬರುತ್ತವೆ. ಚಂದಮಾಮ ಓದುವವರೆಲ್ಲರೂ ಅದರ ಆನಂದ ಪಡೆಯಲಿ. ಮತ್ತು ಅದನ್ನು ಅಭ್ಯಸಿಸಿ ಅವರಂತೆ ದೊಡ್ಡ ಗಾರುಡಿಗರಾಗಲಿ. ಶ್ರೀ ಸರ್ಕಾರರ ಚಿತ್ರವನ್ನು ಇಲ್ಲಿ ಕೊಟ್ಟಿದೆ.

## ಒಗಟುಗಳು

ಇವು ಏನು?

೧. ರಾಜನ ರೂಪು ನೋಡಲು ಅಂದ, ಮುಟ್ಟಿದರೆ ಕೊಂದ.

೨. ಬೆಳಕು ಕೊಡುವುದು ಬೆಂಕಿಯಲ್ಲ, ಉರಿಯುವುದು ಬಿಸಿಯಿಲ್ಲ.

೩. ಹಸುರು ಗಿಡದ ಮೇಲೆ ಮೊಸರು ಚೆಲ್ಲಿದೆ.

೪. ನೆಲೆಯಿಲ್ಲದ ಹೊಂಡದಲ್ಲಿ ಎಲುಬಿಲ್ಲದ ಪ್ರಾಣಿ.

೫. ಬೆಳ್ಳಿಯ ಮೂರ್ತಿಗೆ ಚಿನ್ನದ ಕವಚ.

೬. ನೀರಿಗೆ ಹೋಗಬೇಡ, ನೀರು ಮುಟ್ಟಬೇಡ, ನೀರು ತರದೆ ಬರಬೇಡ.

೭. ರೂಪವಿಲ್ಲ, ಗುಣವಿಲ್ಲ ಬಣ್ಣ ವಿಲ್ಲ, ಇದು ಬಿಟ್ಟರೆ ಗತಿಯಿಲ್ಲ.

೮. ಒಂದೇ ಮನೆಯಲ್ಲಿ ಇಬ್ಬರು ಮಕ್ಕಳು. ಒಬ್ಬ ಕಂಡರೆ ಮತ್ತೊಬ್ಬ ಓಡುವನು.

## ಬುದ್ಧಿವಂತ ಯಾರು?

ಒಬ್ಬ ಹುಡುಗನು ಮತ್ತೊಬ್ಬನನ್ನು ನೋಡಿ, "ಎಲೇ ಸ್ನೇಹಿತನೆ, ದೇವರು ಇರುವ ಸ್ಥಳವನ್ನು ನನಗೆ ತೋರಿಸಿದರೆ, ನಿನಗೊಂದು ಹಣ್ಣು ಕೊಡುವೆನು" ಎಂದು ಹೇಳಿದನು.

ಅದಕ್ಕೆ ಮತ್ತೊಬ್ಬನು "ಗೆಳೆಯನೇ, ದೇವರು ಇಲ್ಲದ ಸ್ಥಳವನ್ನು ನೀನು ತೋರಿಸಿದರೆ ನಿನಗೆ ಬೇಕಾದ್ದನ್ನೆಲ್ಲಾ ಕೊಡುವೆನು" ಎಂದು ಹೇಳಿದನು.

ಇಬ್ಬರಲ್ಲಿ ಯಾರು ಹೆಚ್ಚು ಬುದ್ಧಿವಂತರು, ಹೇಳಿ.

# ಚಂದಮಾಮ ಸ್ಪರ್ಧೆ

(ಮಕ್ಕಳ ಭಾಷಾಭಿವೃದ್ಧಿಗೆ)

## ಆಧಾರಗಳು

* ಎಡದಿಂದ ಬಲಕ್ಕೆ *

1. ದಶಾವತಾರಗಳಲ್ಲಿ ಒಂದು.
3. ಇದು ಕೇಳಲು ನಿಮಗೆ ಆಸೆಯಲ್ಲವೆ!
4. ಗೋವು.
6. ದುಷ್ಟ ಮೃಗಗಳ ಈ ಹಲ್ಲು ಭಯಂಕರ.
8. ವಾಸಸ್ಥಳ.
11. ಯುದ್ಧ.
12. ಇದು ನಡೆಯುದಂತೆ ತಡೆಯುವುದು ಮಾನವನ ಕರ್ತವ್ಯ (ಕಪಟ).
13. ಮಲಗುವುದು.
15. ಗಂಗಾ ತೀರದ ಪ್ರಸಿದ್ಧ ಪಟ್ಟಣ.
16. ಕೀರ್ತಿ.
18. ನೇಗಿಲು.
19. ಸೂರ್ಯ.




* ಮೇಲಿನಿಂದ ಕೆಳಕ್ಕೆ *

2. ಕೊಬ್ಬು. 3. ಕೂಗು.
5. ಹೊಸದು.
6. ಮರಗಳ ಮೇಲೆ ಓಡಾಡಿ ನಿಮ್ಮನ್ನು ನಗಿಸುವ ಪ್ರಾಣಿ.
7. ಮರುಭೂಮಿಯಲ್ಲಿ ಎಲ್ಲಿ ನೋಡಿದರೂ ಇದೇ
9. ಕಷ್ಟಕಾಲದಲ್ಲಿ ಇದು ಮಾಡುವವ ಒಳ್ಳೆಯವ
10. ಕನ್ನಡ ಮಕ್ಕಳ ಸಂತೋಷದ ಹಬ್ಬ
13. ಚಂದ್ರ. 17 ಬಾಣ.
14. ನುಣುಪು.
15. ಸಮಯ.

# ★ ★ ★ ಪಾಲುದಾರರು ★ ★ ★

ಒಂದೂರಿನಲ್ಲಿ ಒಬ್ಬ ಬೆಸ್ತನು ಮೀನು ಹಿಡಿದು ಮಾರಿ ಜೀವಿಸುತ್ತಿದ್ದನು. ಒಂದುದಿನ ಆತನು ದೊಡ್ಡದಾದ ಒಂದು ಕೆಂಪು ಮೀನನ್ನು ಹಿಡಿದನು. ಅದು ನೋಡಲು ಬಹಳ ಅಂದವಾಗಿತ್ತು. ಆ ಬೆಸ್ತನು ಆ ತರದ ಮೀನನ್ನು ಎಂದೆಂದಿಗೂ ನೋಡಿರಲಿಲ್ಲ. ಆದುದರಿಂದ ಅದನ್ನು ಅರಸನಿಗೆ ಕೊಟ್ಟರೆ ಬಹಳ ಬೆಲೆ ಸಿಗುವುದೆಂದು ರಾಜನಲ್ಲಿಗೆ ತೆಗೆದುಕೊಂಡು ಹೊರಟನು. ಆದರೆ ಅರಮನೆಯ ಹೊರ ಬಾಗಿಲಿನ ಕಾವಲುಗಾರನು ಈ ಬೆಸ್ತನನ್ನು ಬಿಡಲಿಲ್ಲ. ಆದರೆ ದುರಾಸೆಯಿಂದ ಆ ಕಾವಲುಗಾರನು ಬೆಸ್ತನಿಗೆ "ನೀನು ಈ ಮೀನಿಗೆ ಎಷ್ಟು ಬಹುಮಾನವನ್ನು ಪಡೆಯುತ್ತೀಯೋ ಅದರ ಅರ್ಧಪಾಲನ್ನು ನನಗೆ ಕೊಡಬೇಕು. ಹಾಗಾದರೆ ಒಳಗೆ ಬಿಡುವೆನು." ಎಂದನು. ಬೆಸ್ತನು ಒಪ್ಪಿದನು.

ಬೆಸ್ತನು ಸ್ವಲ್ಪ ಒಳಗೆ ಹೋದನಂತರ ಒಳಬಾಗಿಲಿನ ಕಾವಲುಗಾರ ಸಿಕ್ಕಿದನು: ಆತನು ಹೀಗೆಂದನು :—"ಈ ಸುಂದರ ಮೀನನ್ನು ನೋಡಿ ಅರಸನು ನಿಜವಾಗಿಯೂ ನಿನಗೆ ದೊಡ್ಡ ಬಹುಮಾನವನ್ನು ಕೊಡುವನು. ನೀನು ಹಿಂತಿರುಗುವಾಗ ನನಗೆ ನಿನ್ನ ಬಹು ಮಾನವ ಅರ್ಧವನ್ನು ಕೊಡಬೇಕು. ಹಾಗಾದರೆ ಮಾತ್ರ ನಿನ್ನನ್ನು ಒಳಗೆ ಬಿಡುವೆನು" ಅದಕ್ಕೂ ಆ ಬೆಸ್ತನು ಒಪ್ಪಿಕೊಂಡನು. ಆಗ ಕಾವಲುಗಾರನು ಆತನನ್ನು ಒಳಗೆ ಹೋಗಲು ಬಿಟ್ಟನು.

ಬೆಸ್ತನು ಕೂಡಲೇ ಅರಸನನ್ನು ನೋಡಿ ಆ ಮೀನನ್ನು ಮುಂದಿಟ್ಟು "ಪ್ರಭೋ! ನಾನು ಬಹು ಅಪರೂಪವಾದ ಒಂದು ಒಳ್ಳೆಯ ಮೀನನ್ನು ತಂದಿದ್ದೇನೆ. ಅದನ್ನು ಸ್ವೀಕರಿ ಸೋಣವಾಗಲಿ" ಎಂದನು. ಅರಸನು ಬೆಸ್ತನ ಕಾಣಿಕೆಯನ್ನು ನೋಡಿ ಸಂತೋಷಭರಿತ ನಾಗಿ "ಎಲೆ ಬೆಸ್ತನೆ! ಮೀನು ಬಹು ಅಂದವಾಗಿದೆ. ಇದುವರೆಗೂ ಇಂಥದನ್ನು ಕಾಣಲಿಲ್ಲ. ಇದಕ್ಕೆ ಬದಲು ನಿನಗೇನು ಬೇಕೋ ಕೇಳು." ಎಂದನು.

"೧೦೦ ಪೆಟ್ಟುಗಳು ಒಡೆಯ!" ಎಂದು ಕೂಡಲೆ ಬೆಸ್ತನು ಉತ್ತರವನ್ನು ಇತ್ತನು. ಅರಸನು ಈ ಉತ್ತರವನ್ನು ಕೇಳಿ ಬೆರಗಾಗಿ "ಎಲೈ ಹುಚ್ಚಾ! ನೀನೇನು ತಪ್ಪು ಮಾಡಿ ದೆಯೋ? ಹಣ ಕೇಳದೆ ಪೆಟ್ಟು ಕೇಳುವರೇ" ಎಂದು ಕೇಳಿದನು. ಆದರೆ ಬೆಸ್ತನು ಬೇರೆ ಏನನ್ನೂ ಸ್ವೀಕರಿಸಲೊಲ್ಲನು. ಆದುದರಿಂದ ಅರಸನು ಈ ವಿಚಿತ್ರಕ್ಕೆ ನಕ್ಕು ಪೆಟ್ಟುಗಳನ್ನು ಕೊಡಲು ಆಜ್ಞಾಪಿಸಿದನು.

ಬೆಸ್ತನಿಗೆ ಹೊಡೆಯಲು ನೌಕರನು ಚಾಟಿಯನ್ನು ತಂದರು. ಆಗ ಬೆಸ್ತರವನು "ನನ್ನೊಡೆಯಾ! ಈ ನನ್ನ ವ್ಯಾಪಾರಕ್ಕೆ ಇಬ್ಬರು ಪಾಲುದಾರರಿದ್ದಾರೆ. ಈ ಬಹುಮಾನ ವನ್ನು ಅವರಿಬ್ಬರಿಗೂ ಅರ್ಧರ್ಧ ಹಂಚಿ ಕೊಡಬೇಕು" ಎಂದು ಕೇಳಿಕೊಂಡನು. ಅವರನ್ನು ಕರೆಸು ಎನಲು ಒಡನೆಯೇ ಇಬ್ಬರು ಕಾವಲುಗಾರರನ್ನು ಕರೆಸಿ ತಲಾ ೫೦ ಏಟು ಗಳನ್ನು ಬಿಗಿಸಿದನು. ಅರಸನಿಗೆ ಬೆಸ್ತನ ಚಾತುರ್ಯ ಆಗತಿಳಿಯಿತು. ಆಮೇಲೆ ಅರಸನು ಬೆಸ್ತರವನಿಗೆ ಒಂದಕ್ಕೆ ಎರಡರಷ್ಟು ಬಹುಮಾನ ಕೊಟ್ಟು ಕಳುಹಿಸಿದನು.

ವರದರಾಜಪ್ರಭೂ.

## ಹಿಂದೀ ಆರನೇಯ ಪಾಠ

ಮಕ್ಕಳಿರಾ !

ನೀವು ಕಳೆದಸಲ ಹಿಂದೀ ವಾಕ್ಯಗಳ ಮೊದಲನೇ ಪಾಠ ಓದಿದಿರಿ. ಈಸಲ ಈ ಕೆಳಗಿನ ಪಾಠವನ್ನು ಓದಿರಿ. ನೀವೇ ಸುಲಭವಾಗಿ ಅರ್ಥಮಾಡಿಕೊಳ್ಳ ಬಲ್ಲಿರಿ.

वह राम है ।
राम अच्छा लडका है ।
वह क्या करता है?
वह पढता है ।
वह क्या पढता है?
वह किताब पढता है ।
वह किताब में एक सबक पढता है ।

वह रमणी है ।
वह राम की बहन है ; अच्छी लडकी है ।
वह क्या करती है?
वह लिखती है ।
वह क्या लिखती है?
वह चिट्ठी लिखती है ।
वह कमला को एक चिट्ठी लिखती है ।

राम और रमणी रोज़ स्कूल जाते हैं ।
वे रोज़ दस बजे स्कूल जाते हैं ।
वहाँ खूब पढते हैं ।
पाँच बजे स्कूल से घर आते हैं और खूब खेलते हैं ।

अच्छा, अच्छी = ಒಳ್ಳೆಯ
करना = ಮಾಡುವುದು
पढना = ಓದುವುದು
किताब = ಪುಸ್ತಕ
सबक = ಪಾಠ
लिखना = ಬರೆಯುವುದು
चिट्ठी = ಪತ್ರ
और = ಮತ್ತು
रोज़ = ದಿನ, ಪ್ರತಿದಿನವೂ

जाना = ಹೋಗುವುದು
हैं = ಇದ್ದಾರೆ, ಇವೆ
वे = ಅವರು, ಅವು
दस = ಹತ್ತು
बजे = ಗಂಟೆ, ಗಂಟೆಗೆ
वहाँ = ಅಲ್ಲಿ
खूब = ಚೆನ್ನಾಗಿ, ತುಂಬ
पाँच = ಐದು
आना = ಬರುವುದು

से = ಇಂದ, ದೆಸೆಯಿಂದ

ಒಂದು ಸಂಗತಿ ನೆನಪಿಡಿ: ಏಕವಚನ ಪುಲ್ಲಿಂಗವಾದರೆ ಕ್ರಿಯಾಪದ **ता है** ಎಂದೂ ಸ್ತ್ರೀಲಿಂಗವಾದರೆ **ती है** ಎಂದೂ, ಬಹುವಚನ ಪುಲ್ಲಿಂಗವಾದರೆ **ते हैं** ಎಂದೂ, ಸ್ತ್ರೀಲಿಂಗವಾದರೆ **ती हैं** ಎಂದೂ ಸೇರಿಸಬೇಕು.



ಈ ಚಿತ್ರಕ್ಕೆ ಎಲ್ಲೆಲ್ಲಿ ಎಂತೆಂತಹ ಬಣ್ಣ ಚೆನ್ನಾಗುವುದೋ ಹಾಕಿ ನೋಡಿ.

Controlling Editor : SRI CHAKRAPANI



Chandamama, September '49 Photo by B. Ranganadham

"ಆಟದ ಆನಂದ"

